# ಯ

# ಎಂದರೆ ಏನು?




ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (85) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org





# ಲು
# ಎಂದರೆ ಏನು?


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (85) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜನವರಿ–2017

ಪ್ರತಿಗಳು : 1000 **ಬೆಲೆ. 45/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣೆ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿ ಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಿಕೆಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
 ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
 ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
 ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
 ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
 ಮಹೇಂದ್ರಜಾಲ,
 ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
 (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
 ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
 ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಲು ಎಂದರೆ ಏನು?

'ಲು' ಎನ್ನುವುದು ಒಂದು ಅಕ್ಷರ. 'ಲು' ಎನ್ನುವ ಅಕ್ಷರ ಉಳಿದ ಭಾಷೆಗಳಲ್ಲಿ ಇದ್ದರೂ ಅದು ಒಂದು ತೆಲುಗು ಭಾಷೆಯೊಳಗಿನದ್ದೇ ಎಂದು ಹೇಳಬಹುದು. ವಾಸ್ತವಕ್ಕೆ ತೆಲುಗು ಭಾಷೆಯಲ್ಲಿ 'ಲು' ಎನ್ನುವ ಪ್ರತ್ಯೇಕ ಅಕ್ಷರ ಇಲ್ಲವೆಂದೇ ಹೇಳಬಹುದು. ತೆಲುಗುನಲ್ಲಿ 'ಲ' ಎನ್ನುವ ಅಕ್ಷರವಿದೆ ಆದರೆ 'ಲು' ಎನ್ನುವ ಅಕ್ಷರವಿಲ್ಲ. ಭಾಷೆ ಎಂದರೆ ಭಾವನೆಯನ್ನು ವ್ಯಕ್ತ ಮಾಡುವುದು ಮಾತ್ರವೇ. ಭಾಷೆಯಲ್ಲಿ ಅಕ್ಷರಗಳಿರಬಹುದು, ಇರದೆ ಹೋಗಬಹುದು. ಭಾಷೆ ಭಾವನೆಯನ್ನು ತಿಳಿಸುವುದೇ ಹೊರತು ಲಿಪಿಯೊಂದಿಗೆ ಸಂಬಂಧವಿರಬಹುದು, ಇರದೆ ಹೋಗಬಹುದು. ಭಾಷೆ, ಲಿಪಿ ಬೇರೆಬೇರೆಯಾದರೂ ಭಾಷೆಗು ಲಿಪಿಗು ಅವಿನಾಭಾವ ಸಂಬಂಧವಿದೆಯೆಂದೇ ಹೇಳಬಹುದು. ಮೊದಲು 'ಭಾಷೆ' ಹುಟ್ಟುತ್ತದೆ. ನಂತರ 'ಲಿಪಿ' ಹುಟ್ಟುತ್ತದೆ. ಭಾಷೆ ಹುಟ್ಟಿದ ನಂತರ ಲಿಪಿ ತಯಾರಾದ ಭಾಷೆಗಳು ಎಷ್ಟಿದ್ದರೂ, ಭಾಷೆ ಹುಟ್ಟಿದ ನಂತರ ಲಿಪಿ ತಯಾರಾಗದೆ ನಿಂತುಹೋದ ಭಾಷೆಗಳು ಎಷ್ಟೋ ಇವೆ. ಅವುಗಳ ವಿವರವನ್ನು ನೋಡಿದರೆ ಹೀಗೆ ಇದೆ. ಒಟ್ಟಾರೆ ಪ್ರಪಂಚ ವ್ಯಾಪ್ತವಾಗಿ ಇರುವ ಭಾಷೆಗಳು 7,105 ಆದಾಗ ಅದರಲ್ಲಿ ಲಿಪಿ ಇರುವವು 3,570 ಭಾಷೆಗಳಿರುವಂತೆ ಸಮಾಚಾರವಿದೆ. ಲಿಪಿ ಇಲ್ಲದ ಭಾಷೆಗಳು 696 ಇವೆ. ಉಳಿದ 2839 ಭಾಷೆಗಳು ಕುಗ್ರಾಮ ಪ್ರಾಂತ್ಯಗಳಲ್ಲಿ ಕಡಿಮೆ ಜನಸಂಖ್ಯೆ ಮಧ್ಯೆ ಇವೆ. ಅವುಗಳಲ್ಲಿ ಲಿಪಿ ಇರುವ ಭಾಷೆಗಳು ಇವುಯೆಂದು ಹೇಳಲಾರೆವು. ಹಾಗೆಯೇ ಲಿಪಿ ಇಲ್ಲದ ಭಾಷೆಗಳು ಇವುಯೆಂದು ಸಹ ಹೇಳಲಾರೆವು. ಗುರುತುಗಳಿಂದಲೂ, ಗೆರೆಗಳಿಂದಲೂ, ವಸ್ತುಗಳಿಂದಲೂ, ಹುಣಸೆ ಬೀಜಗಳನ್ನು ತೋರಿಸುವುದರಿಂದಲೂ ಅನೇಕ ವಿಧಗಳಲ್ಲಿ ವ್ಯಕ್ತ ಮಾಡುವವಾಗಿ ಇರುವುದರಿಂದ ಅವುಗಳಲ್ಲಿ ಕೆಲವನ್ನು ಪ್ರತ್ಯೇಕವಾದ ಲಿಪಿ ಇದೆಯೆಂದು ಹೇಳಲಾರೆವು. ಹಾಗೆಂದು ಲಿಪಿಯೇ ಇಲ್ಲವೆಂದು ಹೇಳುವುದಕ್ಕೆ ಅವಕಾಶವಿಲ್ಲದ ವಿಧದಲ್ಲಿ ಇವೆ.

ಒಬ್ಬರಿಂದ ಮತ್ತೊಬ್ಬರಿಗೆ ಭಾವನೆಯನ್ನು ಕಳುಹಿಸುವುದರಲ್ಲಿ ಎಂದರೆ ಭಾವ ವ್ಯಕ್ತೀಕರಣದಲ್ಲಿ ಮುಖ್ಯವಾದ ಪಾತ್ರ ಪೋಷಿಸುವುದು ಭಾಷೆ ಎಂದೇ

ಹೇಳಬಹುದು. ಭಾಷೆ ಮಾತನಾಡುವಂಥದ್ದು, ಲಿಪಿ ಬರೆಯುವಂಥದ್ದು. ಭಾಷೆಯನ್ನು ಲಿಪಿಯಿಂದ ಬರೆಯಬಹುದು. ಹಾಗೆಯೇ ಲಿಪಿಯನ್ನು ಭಾಷೆ ಯಿಂದ ಹೇಳಬಹುದು. ಆದ್ದರಿಂದ ಭಾಷೆ, ಲಿಪಿ ಎರಡೂ ಅವಿನಾಭಾವ ಸಂಬಂಧ ಹೊಂದಿವೆಯೆಂದು ಹೇಳಬಹುದು. ಪ್ರಪಂಚದಲ್ಲಿ ಮೊದಲು ಜ್ಞಾನ ಭಾವನೆಯನ್ನು ವ್ಯಕ್ತ ಮಾಡಿದಾಗ ಏರ್ಪಟ್ಟ ಶಬ್ದವನ್ನು 'ಭಾಷೆ' ಎಂದು ಮೊಟ್ಟಮೊದಲು ಹೇಳಿದ್ದಾರೆ. ಪ್ರಪಂಚ ತಯಾರಾದಾಗ ಭಾಷೆ ಇಲ್ಲ. ಶಬ್ದ ಇಲ್ಲದ ಸನ್ನೆಗಳಿಂದ ಭಾವನೆಯನ್ನು ತಿಳಿಸಿಕೊಳ್ಳುತ್ತಿದ್ದರು. ಅಂತಹ ಭಾಷೆಗಳು ಈದಿನ ಸಹ ಎರಡು ಸಾವಿರಕ್ಕೂ ಮೇಲ್ಪಟ್ಟು ಇವೆಯೆಂದು ಹೇಳುತ್ತಿದ್ದಾರೆ. ಕೆಲವು ಭಾಷೆಗಳು ಲಿಪಿ ಇಲ್ಲದಿರುವವಾದರೂ ಭಾವನೆ ಮಾತ್ರ ಶಬ್ದದಿಂದಲೇ ಇರುವುದರಿಂದ ಆ ಶಬ್ದವನ್ನು ಭಾಷೆ ಎಂದು ಕರೆದಿದ್ದಾರೆ.

**ಪ್ರಶ್ನೆ :– ಪ್ರಪಂಚದಲ್ಲಿ ಮೊಟ್ಟಮೊದಲು ಮಾತನಾಡಲ್ಪಟ್ಟ ಭಾಷೆಯ ಹೆಸರೇನು?**

**ಉತ್ತರ :–** ಆ ದಿನಗಳಲ್ಲಿ 'ಭಾಷೆ' ಎನ್ನುವ ಹೆಸರು ಇಲ್ಲದಿರುವುದರಿಂದ ಮೊಟಟ್ಟಮೊದಲನೆಯದು ಇಂತಹ ಭಾಷೆಯೆಂದು ಹೇಳುವುದಕ್ಕೆ ಅವಕಾಶವಿಲ್ಲ. ಆ ದಿನ ಮೊಟ್ಟಮೊದಲನೆಯದಾಗಿ ಆಕಾಶ ಭೂತ ಯಾವ ಭಾವನೆಯನ್ನು ವ್ಯಕ್ತಪಡಿಸಿದೆಯೋ ಸಹ ಮನುಷ್ಯರಿಗೆ ತಿಳಿದಿಲ್ಲ. ಸಾಧಾರಣ ಜೀವಿಗಳು ಎಂದರೇ ಸಾಧಾರಣ ಮನುಷ್ಯರು ಯಾರಾಗಲೀ ಅಲ್ಲಿಯವರೆಗು ಶಬ್ದದಿಂದ ಭಾವನೆಯನ್ನು ವ್ಯಕ್ತ ಮಾಡಲಿಲ್ಲ.

**ಪ್ರಶ್ನೆ :– ಭೂಮಿ ಮೇಲೆ ಮನುಷ್ಯರು ಒಬ್ಬರಿಗೊಬ್ಬರು ಮಾತುಗಳಿಂದಾಗಲೀ, ಅಥವಾ ಮಾತುಗಳನ್ನು ಹೋಲಿದ ಶಬ್ದಗಳಿಂದಾಗಲಿ ಒಬ್ಬರ ವಿಷಯವನ್ನು ಮತ್ತೊಬ್ಬರಿಗೆ ತಿಳಿಸಿಕೊಳ್ಳುತ್ತಿರುವರು. ಹಾಗಿರುವಾಗ ಮನುಷ್ಯರೇ ಮಾತನಾಡಲಿಲ್ಲ, ಕನಿಷ್ಟ ಶಬ್ದವೂ ಸಹ ಮಾಡಲಿಲ್ಲ ಎಂದು ನೀವೆನ್ನುತ್ತಿದ್ದೀರ. ಏನೂ ತಿಳಿಯದ ಮನುಷ್ಯರಿಗೆ ಆಕಾಶ ತನ್ನ ಶಬ್ದದಿಂದ ತನ್ನ ಭಾವನೆಯನ್ನು ತಿಳಿಸಿದರೇ ಮನುಷ್ಯ ತಿಳಿಯಬಲ್ಲನಾ?**

**ಉತ್ತರ :-** ಯಾರ ಭಾವನೆಯನ್ನು ಅವರು ತಿಳಿಸುವುದಕ್ಕೆ ಅವರಿಗೆ ತಿಳಿದ ವಿಧದಲ್ಲಿ ಅವರು ತಮ್ಮ ಭಾವನೆಯನ್ನು ವ್ಯಕ್ತ ಮಾಡುತ್ತಾರೆ. ಇನ್ನೊಬ್ಬ ವ್ಯಕ್ತಿಗೆ ತಾವು ತಿಳಿಸುವ ವಿಧಾನ ತಿಳಿಯುತ್ತದಾ ಇಲ್ಲವಾ ಎನ್ನುವುದು ಇಲ್ಲಿ ಮುಖ್ಯವಲ್ಲ. ಯಾರಿಗೆ ತಿಳಿದ ವಿಧಾನದಲ್ಲಿ ಅವರು ತಿಳಿಸುವುದನ್ನು ಭಾಷೆ ಎನ್ನುತ್ತಿದ್ದೇವೆ. ಭಾವನೆಯನ್ನು ತಿಳಿಸುವ ವಿಧಾನ ಹೇಗಾದರೂ ಇರಬಹುದು. ಹೀಗೇ ಇರಬೇಕೆನ್ನುವ ನಿಯಮವಿಲ್ಲ. ಇನ್ನೊಬ್ಬ ವ್ಯಕ್ತಿ ತಿಳಿಸುವ ವಿಧಾನ ಕೇಳುವವನು ತಿಳಿದಿರಬೇಕೆನ್ನುವ ನಿಯಮವಿಲ್ಲ. ತೆಲುಗು ಭಾಷೆ ಬರುವವನ ಹತ್ತಿರಕ್ಕೆ ತಮಿಳ ಭಾಷೆ ಬಂದವನು ಬಂದು ಅವನ ಭಾಷೆಯಲ್ಲಿ ಅವನು ಮಾತನಾಡುವನು. ಅವನಿಗೆ ತಿಳಿದ ವಿಧಾನದ ಪ್ರಕಾರ ಅವನು ಮಾತನಾಡಿದ್ದಾನೆ, ಆದರೇ ಎದುರಿಗಿರುವ ವ್ಯಕ್ತಿ ತಾನು ಮಾತನಾಡುವ ತಮಿಳ ಭಾಷೆ ತಿಳಿದಿರಬೇಕೆನ್ನುವ ನಿಯುಮವಿಲ್ಲ. ಎದುರಿಗಿರುವ ವ್ಯಕ್ತಿ ತಮಿಳನ್ನು ತಿಳಿದರೇ ಅವನಿಗೆ ತಮಿಳಭಾಷೆಯಲ್ಲಿ ಹೇಳಿದ ವಿಷಯ ಅರ್ಥವಾಗುತ್ತದೆ. ನಾವು ಮತ್ತೊಂದು ಊರಿನಲ್ಲಿರುವ ಸ್ನೇಹಿತನ ಹತ್ತಿರಕ್ಕೆ ಹೋದಾಗ ಸ್ನೇಹಿತನ ಮನೆಯ ಮುಂದಿರುವ ನಾಯಿ ನಮ್ಮನ್ನು ನೋಡಿ ಬೊಗಳಿದೆಯೆಂದುಕೊಳ್ಳಿ. ಆಗ ಆ ಬೊಗಳುವುದರಲ್ಲಿ ಅದರ ಭಾವನೆ ಪ್ರಕಾರ ನೀವು ಯಾರೋ ಹೊಸಬರು ನಮ್ಮ ಮನೆಗೆ ಏಕೆ ಬರುತ್ತಿದ್ದೀರ? ಎಂದು ಕೇಳಿದಂತೆ ಮೊದಲೇ ಬೊಗಳಿದೆ. ಆ ವಿಷಯ ನಮಗೆ ಅರ್ಥವಾಗಲಿಲ್ಲ ಆದರೇ, ನಾಯಿ ಬೊಗಳಿದೆ ಎಂದು ಮಾತ್ರ ತಿಳಿದಿದೆ.

ಹಾಗೆಯೇ ಸೃಷ್ಟಿ ಆದಿಯಲ್ಲಿ ಆಕಾಶದಿಂದ ಒಂದು ಶಬ್ದ ಏರ್ಪಟ್ಟಿದೆ. ಅದು ಭಾವನೆಯಿಂದ ಕೂಡಿದ ಮೊದಲ ಶಬ್ದವಾದ್ದರಿಂದ ಅದನ್ನು 'ಭಾಷೆ' ಎಂದಿದ್ದೇವೆ. ಆ ಭಾಷೆ ನಮಗೆ ತಿಳಿದಿರಬೇಕು ಎನ್ನುವ ನಿಯಮವಿಲ್ಲ. ವಾಸ್ತವವಾಗಿ ನಾಯಿ ಬೊಗಳುವುದರಲ್ಲಿನ ಭಾವನೆಯಾಗಲೀ, ತಮಿಳ ಮಾತುಗಳಲ್ಲಿನ ಭಾವನೆಯಾಗಲೀ ನಮಗೆ ತಿಳಿಯದ ಹಾಗೆ, ಆಕಾಶ ಮಾಡಿದ ಶಬ್ದದಲ್ಲಿನ ಭಾವನೆ ಸಹ ನಮಗೆ ತಿಳಿಯದೆಂದೇ ಹೇಳಬಹುದು. ಆಕಾಶ ಮಾಡಿದ ಶಬ್ದದಲ್ಲಿ ಭಾವವಿರುವುದರಿಂದ, ಆಕಾಶ ಸಹ ಒಬ್ಬ ಜೀವಿಯೇ ಆಗಿರುವುದರಿಂದ, ಅಲ್ಲಿ ಆಕಾಶ ಶಬ್ದರೂಪದಲ್ಲಿ ಹೇಳಿರುವುದನ್ನು,

ಮೊಟ್ಟಮೊದಲು ಮಾತನಾಡಿದ ಭಾಷೆಯಾಗಿ ಹೇಳುತ್ತಿದ್ದೇವೆ. ಆ ದಿನಗಳಲ್ಲಿ ಭಾಷೆಗಳೇ ಇಲ್ಲದಿರುವುದರಿಂದ ಭಾಷೆಗಳ ಹೆಸರುಗಳು ಇಲ್ಲವೆಂದು ಹೇಳಬಹುದು. ಆಕಾಶ ನುಡಿದ ಶಬ್ದವನ್ನು ಹೇಳಿದರೇ, ಆ ಭಾಷೆಗೆ ಹೊಸ ಹೆಸರು ಇಟ್ಟುಕೊಳ್ಳಬೇಕಾಗಿದೆ. ಆ ದಿನ ಮೊಟ್ಟಮೊದಲನೆಯದಾಗಿ ಹೇಳಿದ ಭಾವನೆಯಲ್ಲಿ ಯಾವ ಸಮಾಚಾರವಿದೆಯೋ, ಆ ಸಮಾಚಾರಕ್ಕೆ ಸಂಬಂಧಿಸಿದ ಹೆಸರನ್ನು ಇಟ್ಟುಕೊಳ್ಳುವುದು ಒಳ್ಳೆಯದೆಂದುಕೊಳ್ಳುತ್ತೇನೆ. ಆದರೇ ಆ ದಿನ ಆಕಾಶ ಇಂತಹ ಸಮಾಚಾರವನ್ನು ತಿಳಿಸಿದೆಯೆಂದು ಮನುಷ್ಯನಿಗೆ ಸ್ವಲ್ಪವಾದರೂ ತಿಳಿದಿಲ್ಲ. ನಂತರ ನಡೆದ ಕಾಲದಲ್ಲಿ ಸಹ ತಿಳಿದಿಲ್ಲ. ಆ ತಿಳಿಯದತನ ಕೃತಯುಗ, ತ್ರೈತಾಯುಗ, ದ್ವಾಪರ ಯುಗದ ಕೊನೆಯವರೆಗು ಮುಂದುವರೆದಿದೆ. ದ್ವಾಪರಯುಗದ ಕೊನೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಜ್ಞಾನವನ್ನು ಹೇಳಿದಾಗ, ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಮೊದಲ ಶ್ಲೋಕದಲ್ಲಿ **"ಸೃಷ್ಟಿ ಆದಿಯಲ್ಲಿಯೇ ನಾನು ಸೂರ್ಯನಿಗೆ ಜ್ಞಾನ ಹೇಳಿದ್ದೆನು"** ಎಂದಿದ್ದಾನೆ. ಆದರೇ ಅಲ್ಲಿಯೂ ಸಹ ಆಕಾಶವಾಣಿ ಮೂಲಕ ಜ್ಞಾನವನ್ನು ಹೇಳಿದ್ದೆನೆನ್ನುವ ಸಮಾಚಾರವಿಲ್ಲ. 'ತಾನು ಮೊದಲನೆಯದಾಗಿ ಸೃಷ್ಟಿ ಆದಿಯಲ್ಲಿಯೇ ಜ್ಞಾನವನ್ನು ಹೇಳಿದ್ದೇನೆ' ಎಂದು ಮಾತ್ರ ಇದೆ. **ಕಲಿಯುಗದಲ್ಲಿ ಮೂರು ಸಾವಿರ ಆರುನೂರು(3600) ವರ್ಷಗಳು ಕಳೆದ ನಂತರ ಸೂರ್ಯಗ್ರಹ ಭೂಮಿಯಮೇಲೆ ಮನುಷ್ಯರಿಗೆ ಜ್ಞಾನವನ್ನು ತಿಳಿಸಿದಂತೆ, ಜಿಬ್ರಯೇಲ್ ಎನ್ನುವ ಗ್ರಹ ಮುಹಮ್ಮದ್ ಪ್ರವಕ್ತರಿಗೆ, ಆಕಾಶದಲ್ಲಿ ಸೂರ್ಯನಿಂದ ತಿಳಿದ ಜ್ಞಾನವನ್ನು ತಿಳಿಸುವುದು ನಡೆದಿದೆ.** ಆಗ ಅಲ್ಲಿಯವರೆಗು ತಿಳಿಯದ ರಹಸ್ಯ ತಿಳಿದುಹೋಗಿದೆ.

ಸೃಷ್ಟಿ ಆದಿಯಲ್ಲಿ ಆಕಾಶವಾಣಿಯಿಂದ ಸೂರ್ಯನಿಗೆ ಜ್ಞಾನ ತಿಳಿದಿದೆಯೆಂದು ಅರ್ಥವಾಗಿದೆ. ಆದರೇ ಆ ವಿಷಯವನ್ನು ಜಿಬ್ರಯೇಲ್ ಸಹ ಹಾಗೇ ನಡೆದಿದೆಯೆಂದು ಹೇಳಲಿಲ್ಲ. ಆದರೇ ಮಹಾಜ್ಞಾನಿ ಆದ ಜಿಬ್ರಯೇಲ್ ಹೇಳಿದ ಖುರ್‌ಆನ್ ಜ್ಞಾನದಲ್ಲಿ ಸೂರಾ 42, ಆಯತ್ 51ರಲ್ಲಿ ಹೇಳಿದ ಮಾತಿನಲ್ಲಿ ಸ್ವಲ್ಪ ಆಧಾರ ಸಿಕ್ಕಿದೆ. ಅಲ್ಲಿ ದೇವರು ಮನುಷ್ಯನಿಗೆ ತಿಳಿಸುವ ಜ್ಞಾನ ಮೂರು ವಿಧಗಳಲ್ಲಿ ಇರುತ್ತದೆಂದೂ, ಅದರಲ್ಲಿ

"ಆಕಾಶವಾಣಿಯಿಂದ ಒಂದು ವಿಧವಾಗಿ ಜ್ಞಾನವನ್ನು ತಿಳಿಸುವೆನು" ಎಂದು ಹೇಳುವುದಾಗಿದೆ. ಐದು ಸಾವಿರ ವರ್ಷಗಳ ಕೆಳಗೆ ಕೃಷ್ಣನು ಭಗವದ್ಗೀತೆಯನ್ನು ಹೇಳಿದಾಗ ಸೃಷ್ಟಿ ಆದಿಯಲ್ಲಿ ಸೂರ್ಯನಿಗೆ ಜ್ಞಾನವನ್ನು ಹೇಳಿದ್ದೆನು ಎಂದು ಹೇಳಿರುವುದರಿಂದ, ಆಕಾಶವಾಣಿ ಮೂಲಕ ಹೇಳಿದ ಜ್ಞಾನ ಸೂರ್ಯನು ತಿಳಿಯುವುದಕ್ಕೆ ಅವಕಾಶವಿರುವುದರಿಂದ, ಆ ವಿಷಯವನ್ನು ಚೆನ್ನಾಗಿ ಶೋಧಿಸುವುದಾದರೇ ಸೃಷ್ಟಿ ಆದಿಯಲ್ಲಿ ಆಕಾಶವಾಣಿ ಸೂರ್ಯನಿಗೆ ಜ್ಞಾನ ಹೇಳಿದೆಯೆಂದು ತಿಳಿದುಹೋಗುತ್ತಿದೆ. ಕೊನೆಗೆ ಸ್ವಲ್ಪ ಶ್ರಮವಾದರೂ ಸೃಷ್ಟಿ ಆದಿಯಲ್ಲಿ ಆಕಾಶ ತನ್ನ ಶಬ್ದದಿಂದ ದೈವಜ್ಞಾನವನ್ನು ತಿಳಿಸಿದೆಯೆಂದು ಅರ್ಥವಾಗಿಹೋಗಿದೆ. ಆದರೇ ಆಗ ಆಕಾಶವಾಣಿ ನುಡಿದ ಶಬ್ದದಲ್ಲಿರುವ ಭಾವವು ಜ್ಞಾನವೇ ಆದರೂ, ಆಗ ಹೇಳಿದ ಭಾಷೆ ಯಾವುದು? ಎನ್ನುವ ಪ್ರಶ್ನೆಗೆ ಉತ್ತರವನ್ನು ನೋಡಿದರೆ, ಅಂದಿನ ಭಾಷೆ ಮೊದಲನೆಯದು ಮತ್ತು ಹೊಸದು ಆಗಿರುವುದರಿಂದ ಅದಕ್ಕೆ ನಾವೇ ಒಂದು ಹೆಸರನ್ನು ಇಟ್ಟುಕೊಂಡು ಹೇಳಿಕೊಳ್ಳಬೇಕಾಗಿರುತ್ತದೆ. ಆ ದಿನ ಹೇಳಲ್ಪಟ್ಟಿರುವುದು ದೈವಜ್ಞಾನವಾದ್ದರಿಂದ ಅಂದಿನ ಶಬ್ದಕ್ಕೆ ಅಂದರೆ ಭಾವನೆಯನ್ನು ತಿಳಿಸಿದ ಭಾಷೆಗೆ **"ದೈವಭಾಷೆ"** ಎಂದು ಹೆಸರು ಇಟ್ಟುಕೊಳ್ಳೋಣ. ಹಾಗೆಯೇ ಸೃಷ್ಟಿ ಆದಿಯಲ್ಲಿ ಬಂದಿರುವ ಭಾವನೆಯಿಂದ ಕೂಡಿಕೊಂಡ ಶಬ್ದವನ್ನು 'ದೈವಭಾಷೆ' ಎನ್ನುವ ಹೆಸರಿನಿಂದ ಹೇಳಿಕೊಳ್ಳಬಹುದು. ಸೃಷ್ಟಿ ಆದಿಯಲ್ಲಿ ಮೊಟ್ಟಮೊದಲು ಹೇಳಲ್ಪಟ್ಟಿರುವ ಭಾಷೆ ದೈವ ಭಾಷೆ. ಸೃಷ್ಟಿ ಆದಿಯಲ್ಲಿ ನುಡಿದಿರುವ ದೈವಭಾಷೆ ಪ್ರತಿ ವರ್ಷ ನಮ್ಮ ಮುಂದೆ ಕೇಳಿಸುತ್ತಲೇ ಇದೆ. ದೈವಭಾಷೆಯಿಂದ ಆಕಾಶ ಪ್ರತಿ ವರ್ಷ ಮಾನವರಿಗೆ ಎಲ್ಲರಿಗೂ ದೈವಜ್ಞಾನವನ್ನು ತಿಳಿಸುತ್ತಲೇ ಇದೆ. ಅದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 21, ಆಯತ್ 32ರಲ್ಲಿ **"ಆಕಾಶದಿಂದ ಸೂಚನೆಗಳನ್ನು ಕಳುಹಿಸುತ್ತಿದ್ದೇನೆಂದು"** ಹೇಳುವುದು ನಡೆದಿದೆ. ಆಕಾಶದಿಂದ ದೇವರು ಮನುಷ್ಯರಿಗೆ ಮಾಡುವ ಸೂಚನೆಗಳನ್ನೇ **'ದೇವರ ಜ್ಞಾನ'** ಎಂದು ಅನ್ನುತ್ತಿದ್ದೇವೆ. ದೇವರ ಜ್ಞಾನವನ್ನು ಹೇಳಲಾಗಿರುವ ಭಾಷೆಯನ್ನು ದೈವ ಭಾಷೆ ಎಂದು ಹೇಳಬಹುದು. ಆದರೇ ಆ ದೈವಭಾಷೆ ಶಬ್ದ ಎಲ್ಲರಿಗೂ ಕೇಳಿಸುತ್ತಿರುವಾಗ ಪ್ರತಿ ವರ್ಷ ಎಲ್ಲರೂ ಕೇಳುತ್ತಿದ್ದೇವೆ.

**ಪ್ರಶ್ನೆ :– ಭೂಮಿ ಮೇಲೆ ಎಷ್ಟೋ ಭಾಷೆಗಳಿವೆ. ಅವುಗಳಿಗೆ ಹೆಸರುಗಳು ಸಹ ಇವೆ ಲಿಪಿ ಇರುವ ಭಾಷೆಗಳು, ಲಿಪಿ ಇಲ್ಲದ ಭಾಷೆಗಳು ಎಂದು ಎರಡಾಗಿ ವಿಭಜಿಸಿ ನೋಡಿದರೆ ದೈವ ಭಾಷೆಗೆ ಲಿಪಿ ಇಲ್ಲ. ಈಗಿರುವ 7105 ಭಾಷೆಗಳಲ್ಲಿ ಯಾವ ಭಾಷೆ ದೈವ ಜ್ಞಾನಕ್ಕೆ ಹತ್ತಿರವಾಗಿ ಇದೆ. ಯಾವ ಭಾಷೆಯನ್ನು ದೈವಭಾಷೆಯಾಗಿ ಹೇಳಬಹುದು?**

**ಉತ್ತರ :–** ಆಕಾಶ ಮಾಡಿದ ಶಬ್ದವನ್ನು ಗ್ರಹಿಸಿದವನು ಸೂರ್ಯನು. ಸೂರ್ಯನು ಎಷ್ಟೋ ವರ್ಷಗಳು ತಾನು ತಿಳಿದ ಜ್ಞಾನವನ್ನು ಮೆಲಕು ಹಾಕಿಕೊಂಡು, ನಂತರ ಭೂಮಿಯಮೇಲೆ ಮನುಷ್ಯರಿಗೆ ತಿಳಿಸಿದ್ದಾನೆ. ಪ್ರಪಂಚದಲ್ಲಿ ಮೊದಲು ಹುಟ್ಟಿದ ಭಾಷೆ ತೆಲುಗು ಭಾಷೆ ಆಗಿರುವುದರಿಂದ, ಸೂರ್ಯನು ಭೂಮಿಮೇಲೆ ತನ್ನ ಜ್ಞಾನವನ್ನು ತೆಲುಗು ಭಾಷೆಯಲ್ಲಿಯೇ ತಿಳಿಸಿರುವುದರಿಂದ, ತೆಲುಗು ಭಾಷೆ ದೈವಜ್ಞಾನಕ್ಕೆ ಹತ್ತಿರವಾಗಿ ಅರ್ಥಗಳನ್ನು ಹೊಂದಿರುವುದರಿಂದ ತೆಲುಗು ಭಾಷೆಯನ್ನು ಎಲ್ಲ ವಿಧಗಳಲ್ಲಿ ದೈವಭಾಷೆಯಾಗಿ ಹೇಳಬಹುದು.

**ಪ್ರಶ್ನೆ :– ಭಾರತದೇಶದಲ್ಲಿಯೇ ಹುಟ್ಟಿ ಬೆಳೆದ ಸಂಸ್ಕೃತ ಭಾಷೆಯನ್ನು ಬಹಳ ಜನ ಪಂಡಿತರು, ಬ್ರಾಹ್ಮಣರು, ಕೆಲವರು ಜ್ಞಾನಿಗಳೆಂದು ಪ್ರಕಟಿಸಿಕೊಂಡವರು ದೈವಭಾಷೆಯಾಗಿ ಹೇಳುತ್ತಿದ್ದಾರೆ. ದೈವ ಅರ್ಚನೆಗಳನ್ನು ಸಂಸ್ಕೃತ ಮಂತ್ರಗಳಿಂದಲೇ ಮಾಡುತ್ತಿದ್ದಾರೆ. ಯಜ್ಞಯಾಗಗಳ ಹತ್ತಿರ ಸಂಸ್ಕೃತ ಶ್ಲೋಕಗಳನ್ನು, ಮಂತ್ರಗಳ ಹಾಗೆ ಹೇಳುತ್ತಿದ್ದಾರೆ. ವೇದಗಳನ್ನು ಸಂಸ್ಕೃತ ಭಾಷೆಯಲ್ಲಿಯೇ ಬರೆದುಕೊಂಡಿದ್ದಾರೆ. ಎಷ್ಟೋ ಜನ ಸಂಸ್ಕೃತವನ್ನು ದೈವಭಾಷೆಯಾಗಿ ಹೇಳುತ್ತಿರುವಾಗ, ನೀವು ಮಾತ್ರ ತೆಲುಗು ಭಾಷೆಯನ್ನು 'ದೈವಭಾಷೆ' ಎಂದು ಹೇಳುತ್ತಿದ್ದೀರ. ನಿಮ್ಮ ಮಾತನ್ನು ವೇದಪಂಡಿತರ ಹತ್ತಿರದಿಂದ, ಗುಡಿಯಲ್ಲಿನ ಅರ್ಚಕರವರೆಗು ಒಪ್ಪಿಕೊಳ್ಳುವುದಿಲ್ಲ. ಅವರು ಸಂಸ್ಕೃತವನ್ನೇ ದೈವಭಾಷೆ ಎಂದು ಹೇಳುತ್ತಿದ್ದಾರೆ. ಅದಕ್ಕೆ ನೀವು ಏನು ಉತ್ತರ ಹೇಳಬಲ್ಲಿರಿ?**

**ಉತ್ತರ :–** "ಮೊದಲು ಬಂದಿರುವ ಕಿವಿಗಳಿಗಿಂತ ಹಿಂದೆ ಬಂದಿರುವ ಕೊಂಬುಗಳು ಹೆಚ್ಚು" ಎಂದು ಹೇಳಿದಂತಿದೆ ನಿಮ್ಮ ಪ್ರಶ್ನೆ. ಹಿಂದೆ ಬಂದಿರುವ

ಕೊಂಬುಗಳು ಕಿವಿಗಳಿಗಿಂತ ಉದ್ದವಾಗಿದ್ದರೂ ನಂತರ ಬಳಸಿಯಾದರೂ, ಅವು ಹಸುವಿಗೆ ಯಾವಾಗಲೋ ಒಂದುಬಾರಿ ಮಾತ್ರ ಕೆಲಸಕ್ಕೆ ಬರುತ್ತವೆ. ಆದರೇ ಮೊದಲು ಬಂದಿರುವ ಕಿವಿಗಳು ಪ್ರತಿ ಕ್ಷಣ ಶಬ್ದವನ್ನು ಕೇಳಿಸುವಂತೆ ಮಾಡುತ್ತಿರುತ್ತವೆ. ಅತಿ ಚಿಕ್ಕ ಶಬ್ದವನ್ನು ಸಹ ಕೇಳಿಸುವಂತೆ ಶಬ್ದ ಬರುವ ದಿಕ್ಕಿಗೆ ಕಿವಿಯನ್ನು ತಿರುಗಿಸಿ ಶಬ್ದವನ್ನು ಆಲಿಸುವಂತೆ ಮಾಡುತ್ತವೆ. ನಾಲ್ಕು ದಿಕ್ಕುಗಳಿಗು ತಿರುಗಿಸುವ ಕಿವಿಗಳ ಮುಂದೆ ಒಂದು ದಿಕ್ಕಿಗು ಸಹ ತಿರುಗದ ಕೊಂಬುಗಳು ದೊಡ್ಡವೆನ್ನುವುದು ಹೇಗಿರುತ್ತದೋ, ತೆಲುಗು ಭಾಷೆಗಿಂತ ಹಿಂದೆ ಬಂದಿರುವ ಸಂಸ್ಕೃತ ದೊಡ್ಡದೆನ್ನುವುದು ಹಾಗೇ ಇರುತ್ತದೆ. ತೆಲುಗು ಭಾಷೆ ಪ್ರಪಂಚದಲ್ಲಿ ಮೊಟ್ಟಮೊದಲು ಹುಟ್ಟಿದ ಭಾಷೆಯಾದಾಗ, ಸಂಸ್ಕೃತ ಬಹಳ ಹಿಂದೆ ಹುಟ್ಟಿರುವುದೆಂದು ತಿಳಿಯಬೇಕು. ತೆಲುಗು ಭಾಷೆಯಲ್ಲಿ ಇರುವಷ್ಟು ಅಕ್ಷರಗಳು ಮತ್ಯಾವ ಇತರ ಭಾಷೆಯಲ್ಲಿ ಇಲ್ಲ. ಆದ್ದರಿಂದ ಯಾವ ಚಿಕ್ಕ ಶಬ್ದವನ್ನಾದರೂ, ಎಷ್ಟು ಕಠಿಣವಾದ ಶಬ್ದವನ್ನಾದರೂ ತೆಲುಗು ಭಾಷೆಯಲ್ಲಿನ ಲಿಪಿಯಿಂದ ಬರೆಯಬಹುದು.

ಭಾಷೆಗೆ ಲಿಪಿ ಹೆಂಡತಿಯಂಥದ್ದು. ಭಾಷೆಗೆ ತಕ್ಕ ಲಿಪಿ ಇರುವುದು ಗಂಡನಿಗೆ ತಕ್ಕ ಹೆಂಡತಿ ಇದ್ದಂತೇ ಆಗುತ್ತದೆ. ತೆಲುಗು ಭಾಷೆಗೆ ಲಿಪಿಯಾದ ಅಕ್ಷರಗಳು ಹೆಚ್ಚಾಗಿ ಇರುವುದರಿಂದ **ತೆಲುಗು ಪತಿಯಂತಹ ಪುರುಷನಾಗಲೀ, ತೆಲುಗು ಲಿಪಿ ಪತ್ನಿಯಂತಹ ಸ್ತ್ರೀಯಾಗಲೀ ಎಲ್ಲಿಯೂ ಇಲ್ಲವೆಂದು ಹೇಳಬಹುದು.** ಲಿಪಿ ಇಲ್ಲದ ಭಾಷೆ ಮದುವೆಯಾಗದ ಪುರುಷನಂಥದ್ದು. ಸಂಸ್ಕೃತ ಭಾಷೆಗೆ ಲಿಪಿ ಇಲ್ಲ ಆದ್ದರಿಂದ ಸಂಸ್ಕೃತ ಭಾಷೆ ಪತ್ನಿ ಇಲ್ಲದ ಪುರುಷನಂಥದ್ದು. ಸಂಸ್ಕೃತವನ್ನು ಬರೆಯುವುದಕ್ಕೆ ಇತರ ಭಾಷೆಗಳನ್ನು ಬಳಸಿಕೊಳ್ಳಬೇಕಾಗಿದೆ. ಭಾಷೆ ಅಂದ ಮೇಲೆ ಅದು ಭಾವನೆಯನ್ನು ತಿಳಿಸುವುದಕ್ಕೇ ಹೆಚ್ಚಾಗಿ ಉಪಯೋಗಪಡಬೇಕಾಗಿರುವಾಗ, ಸಂಸ್ಕೃತ ಭಾಷೆ ಮಾತ್ರ ಭಾವನೆಯನ್ನು ತಿಳಿಸುವ ಸಂದರ್ಭಗಳಲ್ಲಿ ಬಹಳ ಕಡಿಮೆಯಾಗಿ ಬಳಸಲ್ಪಡುತ್ತಿದೆ. ಅರ್ಚನೆಗಳಲ್ಲಿಯೂ, ಹೊಗಳಿಕೆಗಳಲ್ಲಿಯೂ, ಮಂತ್ರ ಜಪಗಳಲ್ಲಿಯೂ ಬಳಸಿಕೊಳ್ಳುತ್ತಿದ್ದಾರೆ. ಅಷ್ಟೇ ಅಲ್ಲದೆ ಮೊದಲು ಹುಟ್ಟಿದ ತೆಲುಗು ಭಾಷೆಯಲ್ಲಿನ

ಪದಗಳನ್ನು ಹೆಚ್ಚಾಗಿ ಸಂಸ್ಕೃತದಲ್ಲಿ ಇಟ್ಟುಕೊಳ್ಳುವುದು ನಡೆದಿದೆ. ಮತ ಎನ್ನುವ ಪದವಾಗಲೀ, ಶ್ರೀಮತಿಗಳು ಎನ್ನುವ ಮುಂತಾದ ತೆಲುಗು ಪದಗಳಿಗೆ ಸಂಸ್ಕೃತದಲ್ಲಿ ಬಳಸಿಕೊಳ್ಳುವುದು ನಡೆದಿದೆ. ಮದುವೆಯಾಗದ ಪ್ರಸಾದ್ ಮದುವೆಯಾದ ಪ್ರತಾಪ್‌ಗೆ ಪೋಟಿ ಎನ್ನುವಂತೆ, ಲಿಪಿ ಇರುವ ತೆಲುಗು ಭಾಷೆಗೆ ಲಿಪಿ ಇಲ್ಲದ ಸಂಸ್ಕೃತ ಭಾಷೆಯನ್ನು ಪೋಟಿಗೆ ಇಡುವುದು, ತೆಲುಗುಗಿಂತ ಸಂಸ್ಕೃತವೇ ದೊಡ್ಡದೆನ್ನುವುದು ಒಂದು ವಿಚಿತ್ರವಾಗಿದೆ. ಲಿಪಿ ಇರುವ ಭಾಷೆಗಳು 3570 ಇರುವಾಗ, ಲಿಪಿ ಇಲ್ಲದ ಭಾಷೆಗಳು ಕೇವಲ 696 ಮಾತ್ರವೇ. ಕೊರಚರ, ದೊಕ್ಕಲ, ಲಂಬಾಣಿ ಮುಂತಾದ ಭಾಷೆಗಳಿಗೆ ಲಿಪಿ ಇಲ್ಲ. ಎಂದಿಗಾದರೂ ಲಿಪಿ ಇರುವ ಭಾಷೆಗಳಿಗಿಂತ ಲಿಪಿ ಇಲ್ಲದ ಭಾಷೆಗಳು ಹಿಂದೆ ಹುಟ್ಟಿರುವವೆಂದು, ಚಿಕ್ಕವೆಂದು ಎಲ್ಲರ ಭಾವನೆಯಲ್ಲಿರುವಾಗ, ಎಲ್ಲದಕ್ಕಿಂತ ಮೊದಲು ಹುಟ್ಟಿರುವ ತೆಲುಗುಗಿಂತ ಬಹಳ ಹಿಂದೆ ಹುಟ್ಟಿರುವ ಸಂಸ್ಕೃತವನ್ನು ದೊಡ್ಡದೆನ್ನುವುದು, ಹೆಚ್ಚಿನ ಜನರು ಮಾತನಾಡುವ ತೆಲುಗುಗಿಂತ ಕಡಿಮೆ ಜನ ಬಳಸುವ ಸಂಸ್ಕೃತ ಭಾಷೆಯನ್ನು ದೊಡ್ಡದೆನ್ನುವುದು ಬುದ್ಧಿ ಇಲ್ಲದ ಕೆಲಸವೆಂದು ಹೇಳಬಹುದು. ಅಷ್ಟೇ ಅಲ್ಲದೆ ಚರಿತ್ರೆ ತಿಳಿಯದವರೇ ಹಾಗೆ ಮಾತನಾಡುತ್ತಾರೆಂದು ಹೇಳಬಹುದು. ಪ್ರಪಂಚದಲ್ಲಿ ದೈವಜ್ಞಾನ ಹೇಳಲ್ಪಟ್ಟ ಮೊದಲ ಭಾಷೆಯಾಗಿ ತೆಲುಗನ್ನು ಎಲ್ಲದಕ್ಕಿಂತ ದೊಡ್ಡದಾಗಿ ಹೇಳಬಹುದು. ಪ್ರಪಂಚದಲ್ಲಿ ಮೊದಲು ಹುಟ್ಟಿದ ಭಾಷೆಯಾಗಿ, ಪ್ರಪಂಚದಲ್ಲಿ ಎಲ್ಲದಕ್ಕಿಂತ ದೊಡ್ಡದಾದ ಬ್ರಹ್ಮವಿದ್ಯೆಯನ್ನು ಹೇಳಲಾಗಿರುವ ಭಾಷೆಯಾಗಿ ತೆಲುಗು ದೊಡ್ಡದೆಂದು ಹೇಳುವುದಲ್ಲದೆ, ಪ್ರಪಂಚದಲ್ಲಿನ ಎಷ್ಟೋ ಭಾಷೆಗಳಲ್ಲಿ ತೆಲುಗು ಭಾಷಾ ಬೀಜಗಳು ಕಾಣಿಸುತ್ತಿವೆ. ತನ್ನ ಪದಗಳು ಎಲ್ಲಾ ಭಾಷೆಗಳಲ್ಲಿ ಇರುವಾಗ, ತನಗಿಂತ ದೊಡ್ಡ ಭಾಷೆ ಯಾವುದು ಇಲ್ಲವೆನ್ನುವ ಭಾವನೆಯನ್ನು ವ್ಯಕ್ತ ಮಾಡುತ್ತಾ, ಭಾಷೆಗಳೆಲ್ಲವುಗಳಿಗೂ ರಾಜನಾಗಿ ಅಥವಾ ಚಕ್ರವರ್ತಿಯಾಗಿ ತೆಲುಗು ಭಾಷೆ ಇದೆಯೆಂದು ಹೇಳಬಹುದು.

ಹೆಚ್ಚಿನ ಭಾವನೆಯನ್ನು ಕಡಿಮೆ ಬರಹದಲ್ಲಿ ಅಳವಡಿಸಿಕೊಳ್ಳುವ ಪದ್ಯಗಳು ಬರೆಯುವ ಸೌಕರ್ಯ ಒಂದು ತೆಲುಗು ಭಾಷೆಯಲ್ಲಿದೆಯೆಂದು

ಈದಿನ ಧೈರ್ಯವಾಗಿ ಯಾವ ಕವಿಯಾದರೂ ಹೇಳಬಹುದು. ಕವಿಗಳ ಹಿರೆತನ ಒಂದು ತೆಲುಗು ಭಾಷೆಯಲ್ಲಿಯೇ ಹೊರಗೆ ಸಾರಿಕೊಂಡಿದೆ. ಆಟವೆಲದಿ, ತೇಟಗೀತಿ ಎನ್ನುವ ಪದ್ಯಗಳಲ್ಲಿ ಕವಿಗಳಪ್ರತಿಭೆ ಪ್ರಕಟಿತವಾದಾಗ, ಸೀಸ ಪದ್ಯಗಳಲ್ಲಿ ಕವಿಗಳ ನೈಪುಣ್ಯ ಹೊಳೆಯುತ್ತಿದೆ. ತೆಲುಗುನಲ್ಲಿ ಕವಿಗಳು ತೋರಿಸಿದಂತಹ ಚಾಕಚಕ್ಯತೆಯನ್ನು ಇತರ ಭಾಷೆಗಳಲ್ಲಿ ತೋರಿಸುವುದಕ್ಕೆ ಸಾಧ್ಯವಿಲ್ಲ. ಶ್ಲೋಕ ಹೊರತು ಪದ್ಯ ಬರೆಯುವುದಕ್ಕೆ ಕೆಲಸಕ್ಕೆ ಬಾರದ ಸಂಸ್ಕೃತವನ್ನು, ಪದ್ಯವನ್ನು ಶ್ಲೋಕವನ್ನು ಎರಡನ್ನೂ ಬರೆಯುವ ತೆಲುಗುಗಿಂತ ದೊಡ್ಡದೆನ್ನುವುದು ಪ್ರತ್ಯಕ್ಷ ತಪ್ಪಾಗಿ ಕಾಣಿಸುತ್ತಿದೆ. ಎಲ್ಲ ವಿಧಗಳ ಸಂಸ್ಕೃತ ಭಾಷೆಗಿಂತ ತೆಲುಗು ಭಾಷೆಯೇ ದೊಡ್ಡದೆಂದು ಹೇಳಬಹುದು. **ಭೂಮಂಡಲಕ್ಕೆ ಶಕ್ತಿಯನ್ನು ಕೊಡುವ ಸೂರ್ಯನು ಹೇಳಲಾಗಿರುವ ಭಾಷೆಯಾಗಿ, ಆತ್ಮಜ್ಞಾನವನ್ನು, ಆತ್ಮವನ್ನು ವರ್ಣಿಸುವುದರಲ್ಲಿ ತೆಲುಗುಗೆ ತೆಲುಗೇ ಸಾಟಿಯೆಂದು ಹೇಳಬಹುದು**.

**ಪ್ರಶ್ನೆ :– ನೀವು ತೆಲುಗು ಭಾಷಾಭಿಮಾನಿಗಳಾಗಿ ಇದ್ದೀರ. ಆದ್ದರಿಂದ ತೆಲುಗು ಭಾಷೆಯನ್ನು ಅಷ್ಟಾಗಿ ಹೊಗಳುತ್ತಿದ್ದೀರ ಎಂದು ಅಂದುಕೊಳ್ಳುತ್ತಿದ್ದೇವೆ.**

**ಉತ್ತರ :–** ಸುಮ್ಮನೆ ಅಂದುಕೊಂಡರೇ ಯಾವ ಪ್ರಯೋಜನವಿರುವುದಿಲ್ಲ. ನಾನು ಸಹ ಆಧಾರ ಇಲ್ಲದೆ ಸುಮ್ಮನೆ ಹೊಗಳಿದರೇ ನನಗೂ ಸಹ ಏನೂ ಪ್ರಯೋಜನೆ ಇರುವುದಿಲ್ಲ. ನಾನು ಎಲ್ಲಾ ಬಿಡಿಸಿ ತೋರಿಸುತ್ತಾ ತೆಲುಗು ಭಾಷೆ ದೊಡ್ಡದೆಂದು ಹೇಳುತ್ತಿರುವಾಗ, ನನ್ನನ್ನು ಭಾಷಾಭಿಮಾನಿಯೆಂದು ಹೇಳುವುದು ನಿಮಗೆ ಸರಿಯೇನೋ ಒಂದು ಸಲ ಹಿಂತಿರುಗಿ ಆಲೋಚಿಸಿಕೊಳ್ಳಿ. ಆಧ್ಯಾತ್ಮಿಕಕ್ಕೆ ತೆಲುಗುನಲ್ಲಿ ಇದ್ದಷ್ಟು ಅರ್ಥ, ವಿವರ ಬೇರೇ ಭಾಷೆಯಲ್ಲಿ ಇದೆಯೇನೋ ನೀವೇ ಹೇಳಿರಿ! **"ಆತ್ಮ"** ಎನ್ನುವ ಪದ ತೆಲುಗು ಭಾಷೆಯಲ್ಲಿಯೇ ಹುಟ್ಟಿದೆ. ತೆಲುಗು ಭಾಷೆಯಲ್ಲಿಯೇ ಸಂಪೂರ್ಣ ಅರ್ಥವನ್ನು ಕೊಡುತ್ತಿದೆ. ವಾಸ್ತವವಾಗಿ ತೆಲುಗು ಭಾಷೆ ದೈವಭಾಷೆಯೇ. ಸೃಷ್ಟಿ ಆದಿಯಲ್ಲಿ ಆಕಾಶದಿಂದ ದೇವರು ತನ್ನ ಜ್ಞಾನವನ್ನು ಮನುಷ್ಯರಿಗೆ ಒದಗಿಸಿದ್ದಾನೆ. ಆಕಾಶ ಮಹಾಭೂತವೇ ಆದರೂ ಒಬ್ಬ ಜೀವಿಯೇ ಆಗಿರುವುದರಿಂದ "ಜೀವಿಯು ಏನೂ ಮಾಡಲಿಲ್ಲ"

ಎನ್ನುವ ಸೂತ್ರದ ಪ್ರಕಾರ ಆಕಾಶ ಹೇಳಿದೆಯೆಂದು ನಾವು ಅಂದುಕೊಂಡರೂ ವಾಸ್ತವವಾಗಿ ಆಕಾಶ ಅಲ್ಲಿ ಹೇಳಲಿಲ್ಲ. ಆಕಾಶ ಜೀವಿಯೊಂದಿಗೆ ಸಂಬಂಧಪಟ್ಟಿರುವ ಆತ್ಮವೇ ಜ್ಞಾನವನ್ನು ಸೂರ್ಯನಿಗೆ ತಿಳಿಸಿದೆಯೆಂದು ಹೇಳಬಹುದು. ಆಕಾಶದಲ್ಲಿ ಅಡಗಿರುವ ಆತ್ಮ ತಿಳಿಸಿರುವುದೇ ಅಂದಿನ ಜ್ಞಾನ ಎಂದು ತಿಳಿದುಹೋಗಿದೆ. ಆಗ ಸೂರ್ಯನಿಗೆ ತಿಳಿದ ಜ್ಞಾನ ಮೂರು ಯುಗಗಳ ನಂತರ ಮೂರು ದೈವಗ್ರಂಥಗಳಾಗಿ ಪ್ರಪಂಚಕ್ಕೆಲ್ಲಾ, ಪ್ರತಿ ಒಬ್ಬರಿಗೂ ಜ್ಞಾನವಾಗಿದೆ. ಇಲ್ಲಿ ಜ್ಞಾನ ಜಿಜ್ಞಾಸಿಗಳು ಸ್ವಲ್ಪ ಆಲೋಚಿಸಬೇಕಾಗಿದೆ. ಮೂರನೆ ಕೊನೆಯ ದೈವ ಗ್ರಂಥದಲ್ಲಿ ಮೂರನೆ ಸೂರಾದಲ್ಲಿ ಏಳನೇ ಆಯತ್‌ನಲ್ಲಿ ಹೀಗೆ ಹೇಳಿದ್ದಾರೆ. (3-7) **"ದೇವರ ಜ್ಞಾನ ದೇವರಿಗೆ ಹೊರತುಪಡಿಸಿ ಮತ್ತ್ಯಾರಿಗೂ ತಿಳಿದಿಲ್ಲ"** ಎಂದು ಹೇಳಲಾಗಿದೆ. ಆದರೇ ಪ್ರಥಮ ದೈವಗ್ರಂಥದಲ್ಲಿ ನಾನು ಸೃಷ್ಟಿ ಆದಿಯಲ್ಲಿ ಸೂರ್ಯನಿಗೆ ಜ್ಞಾನ ಹೇಳಿದ್ದೆನು ಎಂದು ಸ್ವತಃವಾಗಿ ದೇವರೇ ಹೇಳಿದಂತೆ ಇದೆ. "ದೇವರ ಜ್ಞಾನ ದೇವರಿಗೆ ಹೊರತು ಇತರರಿಗೆ ತಿಳಿದಿಲ್ಲ" ಎಂದು ಹೇಳವುದೇ ಅಲ್ಲದೇ "ಸೃಷ್ಟಿ ಆದಿಯಲ್ಲಿ ಸೂರ್ಯನಿಗೆ ನಾನೇ ಹೇಳಿದ್ದೇನೆ" ಅಂದಾಗ ದೇವರು ಹೊರತು ಯಾರೂ ಹೇಳಲಿಲ್ಲವೆಂದು ತಿಳಿದುಹೋಗುತ್ತಿದೆ. ಇನ್ನೊಂದು ವಿಧವಾಗಿ ನೋಡಿದರೆ ದೇವರು ಯಾವುದೂ ಮಾಡುವವನಲ್ಲ, ಯಾವುದನ್ನೂ ಹೇಳುವವನಲ್ಲ ಎಂದು ಹೇಳುವುದಕ್ಕೆ ದೇವರು ರೂಪ, ನಾಮ, ಕ್ರಿಯೆಗಳು ಇಲ್ಲದವನೆಂದು ತಿಳಿದಿದೆ. ಕ್ರಿಯೆ ಇಲ್ಲದವನೆನ್ನುವ ಧರ್ಮದ ಪ್ರಕಾರ ನೋಡಿದರೇ ದೇವರು ಏನೂ ಮಾಡಲಿಲ್ಲ, ಏನೂ ಹೇಳಲಿಲ್ಲವೆಂದು ಅರ್ಥವಾಗುತ್ತಿದೆ. ಇದರ ಪ್ರಕಾರವಾದರೇ ಸೃಷ್ಟಿ ಆದಿಯಲ್ಲಿ ಸೂರ್ಯನಿಗೆ ಜ್ಞಾನವನ್ನು ತಿಳಿಸಿದ್ದೆನು ಎನ್ನುವ ಮಾತು ಅಸತ್ಯವಾಗುತ್ತದೆ. ಅಷ್ಟೇ ಅಲ್ಲದೆ ದೇವರ ಜ್ಞಾನ ದೇವರಿಗೆ ಹೊರತು ಮತ್ತ್ಯಾರಿಗೂ ತಿಳಿದಿಲ್ಲ" ಎಂದ ದೇವರ ಮಾತೂ ಸಹ ಅಸತ್ಯವಾಗುತ್ತದೆ. ಒಂದುವೇಳೆ ಈ ಮಾತುಗಳೇ ಸತ್ಯವೆಂದುಕೊಂಡರೇ ದೇವರು ಎಲ್ಲ ಕಾರ್ಯಗಳು ಮಾಡಿದವನಾಗುತ್ತಾನೆ.

ಒಂದು ವಿಧವಾಗಿ ನೋಡಿದರೇ ದೇವರು ಕೆಲಸಗಳು ಮಾಡುವುದಿಲ್ಲ ವೆಂದು ತಿಳಿಯುತ್ತಿದೆ. ಮತ್ತೊಂದು ವಿಧವಾಗಿ ನೋಡಿದರೇ ದೇವರು ಕೆಲಸಗಳು

ಮಾಡುವನೆಂದು ತಿಳಿಯುತ್ತಿದೆ. ಈ ಎರಡರ ಮಧ್ಯ ಯಾವುದು ಸತ್ಯವೊ, ಯಾವುದು ಅಸತ್ಯವೊ ಅರ್ಥವಾಗದೆ ಮನುಷ್ಯರು ತಲೆಗಳು ಹಿಡಿದುಕೊಳ್ಳಬೇಕಾಗಿರುತ್ತದೆ.

**ಪ್ರಶ್ನೆ :– ನೀವು ದಾರಿ ತಪ್ಪಿ ಎಲ್ಲಿಗೋ ಹೋಗಿ 'ದೇವರು ಸತ್ಯನೋ, ಅಸತ್ಯನೋ' ಎಂದು ಹೇಳುತ್ತಿದ್ದೀರ. ನಾನು ಹೇಳಿರುವುದು ನೀವು ತೆಲುಗುವೊಂದರ ಭಾಷಾಭಿಮಾನಿಗಳು ಎಂದಿದ್ದೇನೆ. ನೀವು ಭಾಷೆಯನ್ನು ಕುರಿತು ಪ್ರಾರಂಭಮಾಡಿ ವಿವಾದಾಸ್ಪದ ವಿಷಯದೊಳಗೆ ಹೋಗಿದ್ದೀರ.**

**ಉತ್ತರ :–** ನನ್ನನ್ನು ತೆಲುಗು ಭಾಷಾಭಿಮಾನಿಗಳು ಎಂದಿದ್ದೀರ. ಆ ವಿಷಯವಾಗಿ ತೆಲುಗು ಭಾಷೆ ಎಷ್ಟು ದೊಡ್ಡದೋ ತಿಳಿಯುವುದಕ್ಕೇ ಈ ಉಪೋದ್ಘಾತವನ್ನು ಹೇಳುತ್ತಿದ್ದೇನೆ. ತೆಲುಗು ಭಾಷೆ ಒಂದು ಸಲ ದೊಡ್ಡದೆಂದು ನಾನು ಹೇಳುವುದರಿಂದ, ಹೇಗೆ ದೊಡ್ಡದೆನ್ನುವ ವಿಷಯ ನಿಮಗೆ ತಿಳಿಯದೆ ನನ್ನನ್ನು ತೆಲುಗು ಭಾಷಾಭಿಮಾನಿಗಳೆಂದಿದ್ದೀಯ. ನನಗೆ ಯಾವ ಭಾಷೆಯ ಮೇಲೆ ಅಭಿಮಾನವಿಲ್ಲ. ಆದರೇ ತೆಲುಗು ಭಾಷೆಯನ್ನು ಹೆಚ್ಚಾಗಿ ಹೇಳುವುದಕ್ಕೆ ನನ್ನ ಹತ್ತಿರ ಅನೇಕ ಕಾರಣಗಳಿವೆ. ಅವುಗಳನ್ನು ತಿಳಿಸುವುದಕ್ಕೇ ಮೊದಲು ಇದೆಲ್ಲಾ ಹೇಳಬೇಕಾದ ಅವಶ್ಯಕವಾಗಿದೆ. ದೇವರು ಎರಡು ವಿಧಗಳಾಗಿ ಹೇಳಿದ್ದಾನೆಂದೂ, ದೇವರೇ ಅಸತ್ಯವನ್ನು ಹೇಳಿದ್ದಾನೆಂದು ನಾನು ಹೇಳುತ್ತಿರುವಂತೆ ನಿನಗೆ ಅರ್ಥವಾಗಿದೆ. ಆದ್ದರಿಂದ ನಾನು ವಿವಾದಾಸ್ಪದ ಮಾತುಗಳು ಹೇಳುತ್ತಿರುವಂತೆ ನಿನಗೆ ಅರ್ಥವಾಗಿದೆ. ವಾಸ್ತವವಾಗಿ ಹೇಳುವುದು ವಿವಾದಾಸ್ಪದವಲ್ಲ. ದೇವರು ಹೇಳಿರುವುದು ಹೇಳಿದಂತೆ ಹೇಳುತ್ತಿದ್ದೇನೆ. ದೇವರು ಹೇಳಿದ ಮಾತುಗಳಲ್ಲಿ ಅಸತ್ಯ ಎಲ್ಲಿಯೂ ಇಲ್ಲ. ಆದರೇ ದೇವರು ಹೇಳಿದ ಜ್ಞಾನ ಮನುಷ್ಯರಿಗೆ ಅರ್ಥವಾಗಲಿಲ್ಲವೆಂದು ಹೇಳುತ್ತಿದ್ದೇನೆ. ದೇವರ ಜ್ಞಾನ ಅರ್ಥವಾಗದೇ ಹೋದರೇ ದೇವರು ಒಂದು ಕಡೆ ಒಂದು ವಿಧ, ಮತ್ತೊಂದು ಕಡೆ ಮತ್ತೊಂದು ವಿಧ ಹೇಳಿದಂತೆ ತಿಳಿಯುತ್ತದೆ. ಆದ್ದರಿಂದ ದೇವರ ಜ್ಞಾನವನ್ನು ತಿಳಿಯುವುದಕ್ಕೆ ಎಷ್ಟೋ ಶ್ರದ್ಧೆ ಅವಶ್ಯಕವೆಂದು ಹೇಳುತ್ತಿದ್ದೇನೆ

ದೇವರು ಹೇಳಿದ ಜ್ಞಾನದಲ್ಲಿ "ದೇವರು ಕೆಲಸ ಮಾಡುವವನಲ್ಲ" ಎಂದು ಇದೆ. ಅದೇ ದೇವರ ಮಾತುಗಳಲ್ಲಿ "ನಾನು ಈ ವಿಶ್ವವೆಲ್ಲವನ್ನೂ ಸೃಷ್ಟಿಸಿದ್ದೇನೆಂದು" ಇದೆ. ಆಗ ಮೊದಲ ಮಾತಿಗೆ ಹಿಂದಿನ ಮಾತು ಪೂರ್ತಿ ವಿರುದ್ಧವಾಗಿರುವಂತೆ ತಿಳಿಯುತ್ತಿದೆ. ಹಾಗೆ ಹೇಳಬೇಕಾದ ಅಗತ್ಯವೇನು ಬಂದಿದೆಯೆಂದು ಆಲೋಚಿಸಿದರೇ, ಎರಡು ಮಾತುಗಳೂ ನಿಜವೇಯೆಂದು ತಿಳಿಯುತ್ತಿದೆ. ದೇವರು ಹೇಳಿದ ಎರಡು ಮಾತುಗಳು ವಾಸ್ತವವೇ ಎಂದು ಹೇಳುವುದಕ್ಕೆ, ಮೊದಲು ದೇವರು ಎಂತಹವನೋ ತಿಳಿಯಬೇಕಾಗಿದೆ. ಈಗ ಅಸಲು ವಿಷಯಕ್ಕೆ ಬರೋಣ. ದೇವರು ಒಬ್ಬನೇ ಆದರೂ, ಆತನು ಒಟ್ಟು ನಾಲ್ಕು ವಿಧಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಅದರಲ್ಲಿ ಮೂರು ಭಾಗಗಳನ್ನು ಒಂದು ಕಡೆ, ಮತ್ತೊಂದು ಭಾಗವನ್ನು ಒಂದು ಕಡೆ ನಿಲ್ಲಿಸಿ ಆಟ ಶುರುಮಾಡಿದ್ದಾನೆ. ಜಗನ್ನಾಟಕ ಎನ್ನುವ ಈ ಆಟದಲ್ಲಿ ದೇವರಿಂದ ವಿಭಜಿಸಲ್ಪಟ್ಟ ಪರಮಾತ್ಮ, ಆತ್ಮ, ಜೀವಾತ್ಮ ಮೂರೂ ಒಂದು ಕಡೆ ಇರುವಾಗ, ಹಾಗೆಯೇ ಪ್ರಕೃತಿಯೆಂಬ ಒಂದು ಭಾಗ ಮತ್ತೊಂದು ಕಡೆ ಇದೆಯೆಂದು ತಿಳಿಯಬೇಕು. ಇದೆಲ್ಲವೂ ದೇವರು ದೇವರಾಗಿದ್ದೂ ತನ್ನಿಂದ ಉಳಿದ ಭಾಗಗಳನ್ನು ದೇವರು ವಿಭಜಿಸಿದ್ದಾನೆಂದು ತಿಳಿಯುತ್ತಿದೆ. ಪ್ರಕೃತಿ ಎಂದರೇ ಕಾಣಿಸುವ ಪ್ರಪಂಚವೆಂದು ತಿಳಿಯಬೇಕು. ಆದರೇ ಜೀವಾತ್ಮ, ಆತ್ಮ, ಪರಮಾತ್ಮ ಕಾಣಿಸದಂತೆ ಇವೆಯೆಂದು ಹೇಳಬಹುದು. **ಮೂರು ಆತ್ಮಗಳನ್ನು ತಿಳಿಯುವುದೇ ನಿಜವಾದ ಜ್ಞಾನ**. ಒಂದು ಶರೀರವನ್ನು ತೆಗೆದುಕೊಂಡು ನೋಡಿದರೆ, ಕಾಣಿಸುವ ಶರೀರ ಪ್ರಕೃತಿಯಿಂದ ತಯಾರಾಗಿದೆ. ಕಾಣಿಸುವ ಪ್ರಕೃತಿ ಶರೀರದಲ್ಲಿ ಕಾಣಿಸದ ಜೀವಾತ್ಮ, ಆತ್ಮ, ಪರಮಾತ್ಮಗಳು ನಿವಾಸಿಸುತ್ತಿವೆ. ಜೀವಾತ್ಮ ಮಾತ್ರ ಕರ್ಮಬದ್ಧನಾಗಿ ಇರುವುದರಿಂದ ಆತನು ಶಕ್ತಿ ಹೀನನು. ಜೀವಾತ್ಮ ಏನೂ ಮಾಡದಿರುವುದಾಗಿ ಇದ್ದು, ಕರ್ಮದಲ್ಲಿ ಬಂಧಿಸಲ್ಪಟ್ಟಿರುವುದರಿಂದ ಆತ್ಮವೇ ಜೀವಿಯನ್ನು ಆಡಿಸುತ್ತಿದೆ. ಹಾಗೆಯೇ ಶರೀರದಲ್ಲಿನ ಪರಮಾತ್ಮ ಆತ್ಮಗಿಂತ ಬೇರೆಯಾಗಿರುವುದರಿಂದ, ಶರೀರದಲ್ಲಿ ನಡೆಯುವ ಕೆಲಸಗಳಿಗೆ ಸಾಕ್ಷಿಯಾಗಿದ್ದು ಏನೂ ಮಾಡದೇ ಇದೆ. ಜೀವಿಯು ಕರ್ಮ ಪ್ರಕಾರ ಮಾಡಬೇಕಾದ ಕೆಲಸಗಳನ್ನು ಆತ್ಮವೇ ಮಾಡುತ್ತಾ

ಜೀವಾತ್ಮ ಮಾಡುವಂತೆ ಜೀವಿಯ ಭಾವನೆಯನ್ನನುಸರಿಸಿ ಲೆಕ್ಕಿಸುತ್ತಿದೆ. ಇಲ್ಲಿ "ಜೀವಿಯು ಏನೂ ಮಾಡಲಾರನು" ಎನ್ನುವ ಸೂತ್ರ (ಧರ್ಮ) ನೆರವೇರುತ್ತಿದೆ. ಜೀವಿಯು ಮಾಡಲಾರನು, ಜೀವಿಯು ಮಾಡುವುದಕ್ಕೆ ಕೈಲಾಗದವನು. ಆದ್ದರಿಂದ ಜೀವಿಯ ಕಾರ್ಯವಾಗಿ ನಿರ್ಣಯಿಸಲ್ಪಟ್ಟಿರುವ ಕರ್ಮವನ್ನು ಆತ್ಮವೇ ಚೈತನ್ಯವಾಗಿ ಮಾಡುತ್ತಿದೆ. ಜೀವಾತ್ಮ ಮಾಡದ ಕೆಲಸವನ್ನು ಜೀವಾತ್ಮನ ಭಾವನೆಯನ್ನನುಸರಿಸಿ ಜೀವಾತ್ಮ ಮಾಡಿದಂತೋ, ಮಾಡದಂತೋ ಲೆಕ್ಕಿಸಲ್ಪಡುತ್ತದೆ.

ಮತ್ತೊಂದು ಗಮನಿಸಬೇಕಾದ ವಿಷಯವೇನೆಂದರೇ! ದೇವರು ಏನಾದರೂ ಮಾಡಬಲ್ಲನು, ಆದರೂ ಮಾಡುವುದಿಲ್ಲ. ಜೀವಿಯು ಕೈಲಾಗದೆ ಮಾಡುವುದಿಲ್ಲ, ದೇವರು ಕೈಲಾದರೂ ಸಹ ಮಾಡುವುದಿಲ್ಲ. ಶರೀರದಲ್ಲಿ ಯಾವ ಕೆಲಸವನ್ನೂ ಮಾಡದವರು ಇಬ್ಬರು ಇದ್ದಾರೆ. ಅವರೇ ಜೀವಾತ್ಮ, ಪರಮಾತ್ಮಯೆಂದು ಹೇಳಬಹುದು. ಅಂದರೆ ಜೀವಿಯು, ದೇವರು ಇಬ್ಬರೂ ಕೆಲಸ ಮಾಡುವುದಿಲ್ಲ. ಜೀವಿಯು ಮಾಡಲು ಕೈಲಾಗದೆ ಮಾಡುವುದಿಲ್ಲ. ದೇವರು ಮಾಡುವುದಕ್ಕೆ ಕೈಲಾದರೂ ಕೂಡಾ ಮಾಡಲಾಗದಂತಿದ್ದಾನೆ. ಆದರೇ ಜೀವಿಯು ಕರ್ಮಪ್ರಕಾರ ಮಾಡಬೇಕಾದ ಕೆಲಸಗಳನ್ನು ಮಧ್ಯದಲ್ಲಿರುವ ಆತ್ಮ ಮಾಡಿ ಇಡುತ್ತಿದೆ. ಮಧ್ಯದಲ್ಲಿರುವ ಆತ್ಮ ಎಲ್ಲ ಕೆಲಸಗಳು ಮಾಡುವುದಕ್ಕೆ ಸಿದ್ಧವಾಗಿದೆ. ಆದರೂ ಆತ್ಮ ಮಾಡುವುದಕ್ಕೆ ಯಾವ ಕೆಲಸವೂ ಇಲ್ಲ. ಆದ್ದರಿಂದ ಕೈಲಾಗದ ಜೀವಿಯ ಕೆಲಸವನ್ನು, ಕೈಲಾಗುವ ದೇವರ ಕೆಲಸವನ್ನು ಆತ್ಮ ಮಾಡುತ್ತಿದೆ. ಖಾಲಿಯಾಗಿರುವ ಆತ್ಮ ಸುಮ್ಮನಿರದೆ ಇತ್ತ ಜೀವಿಯ ಕೆಲಸವನ್ನು, ಅತ್ತ ದೇವರ ಕೆಲಸವನ್ನು ಎರಡನ್ನೂ ಮಾಡುತ್ತಿದೆ. ಪರಮಾತ್ಮ, ಜೀವಾತ್ಮ ಮಧ್ಯದಲ್ಲಿ ಯಾವ ಕೆಲಸ ಇಲ್ಲದಂತೆ ಆತ್ಮ ಇದೆ. ಶರೀರದಲ್ಲಿ ದೇವರಿಗೆ ಕೆಲಸವಿದೆ, ಜೀವಿಗೆ ಕರ್ಮವನ್ನು ಅನುಭವಿಸುವ ಕೆಲಸವಿದೆ. ದೇವರಿಗೆ ಕರ್ಮವಿಲ್ಲ ಆದರೂ ಜೀವಿಗಳಿಗೆ ತನ್ನ ಜ್ಞಾನ ತಿಳಿಸುವ ಕೆಲಸವಿದೆ. ದೇವರ ಜ್ಞಾನ ದೇವರಿಗೆ ಹೊರತು ಇತರರಿಗೆ ಯಾರಿಗೂ ತಿಳಿದಿಲ್ಲ. ಹಾಗಿರುವಾಗ ದೇವರೇ ತನ್ನ ಜ್ಞಾನವನ್ನು ತಿಳಿಸಬೇಕಾದ ಅಗತ್ಯವಿದೆ. ದೇವರಿಗೆ ಪ್ರಪಂಚ ಸಂಬಂಧ ಕೆಲಸ ಏನೂ ಇಲ್ಲ. ಪ್ರಪಂಚ ಸಂಬಂಧ ಪ್ರತಿ ಕೆಲಸವನ್ನು ಪ್ರಕೃತಿ

ಜನಿತವಾದ ಮಾಯಯೇ ಮಾಡುತ್ತಿದೆ. ಮನುಷ್ಯರನ್ನು ಹುಟ್ಟಿಸುವುದು, ಜೀವಿಸುವಂತೆ ಮಾಡುವುದು, ಮರಣಿಸುವಂತೆ ಮಾಡುವುದು ಮುಂತಾದ ಕಾರ್ಯಗಳೆಲ್ಲವನ್ನೂ ಪ್ರಕೃತಿಯೇ ಮಾಡುತ್ತಿದೆ. ಇನ್ನೂ ದೇವರು ಮಾಡಬೇಕಾದ ಜ್ಞಾನ ಸಂಬಂಧ ಕಾರ್ಯಗಳನ್ನು ದೇವರ ಬದಲು ಆತ್ಮವೇ ಮಾಡುತ್ತಿದೆ.

ಆತ್ಮಕ್ಕೆ ಕೆಲಸ ಇಲ್ಲದಿರುವುದರಿಂದ ತಾನೇ ಚೈತನ್ಯವಾಗಿ ಶರೀರದಲ್ಲಿನ ದೇವರ ಕೆಲಸವನ್ನು ಜೀವಿಯ ಕೆಲಸವನ್ನು ಮಾಡುತ್ತಿದೆ. ಶರೀರದಲ್ಲಿನ ಜೀವಿಯು ಕೆಲಸಗಳು ಮಾಡಲಾರನು. ಆದರೂ ನಡೆಯುವ ಕೆಲಸವನ್ನು ನಾನೇ ಮಾಡುತ್ತಿದ್ದೇನೆಂದು ತಾನು ಮಾಡದಿದ್ದರೂ ಹೇಳಿಕೊಳ್ಳುತ್ತಿದ್ದಾನೆ. ದೇವರು ಎಲ್ಲದಕ್ಕೂ ಅಧಿಪತಿಯಾಗಿರುವುದರಿಂದ ತನ್ನ ಕೆಲಸವನ್ನು ತನ್ನವನು ಮಾಡಿದ್ದಾನೆಂದು ಅಂದುಕೊಂಡು ಮೌನವಾಗಿ ಇರುತ್ತಾನೆ. ಜೀವಾತ್ಮ, ಪರಮಾತ್ಮಗಳ ಮಧ್ಯದಲ್ಲಿರುವ ಆತ್ಮ ಸ್ವತಃವಾಗಿ ಚೈತನ್ಯವಾಗಿರುವುದರಿಂದ, ತನ್ನ ಇಷ್ಟ ಬಂದಂತೆ ಪ್ರವರ್ತಿಸಿ ತಾನು ಏನು ಮಾಡಬೇಕೆಂದುಕೊಂಡರೂ ಮಾಡಬಲ್ಲನು. ಆತ್ಮ ಎಂದರೆ 'ಅಡಗಿರುವುದು'. ಆತ್ಮ ಎಂದರೇ ಸುಮ್ಮನಿರುವುದು ಅಲ್ಲ. ಆತ್ಮ ಎಂದರೇ 'ಅನುಕ್ಷಣ ಕೆಲಸಮಾಡುವುದು' ಎಂದು ಹೇಳಲ್ಪಡುತ್ತಿದೆ. ಆತ್ಮಕ್ಕೆ ಕರ್ಮವಿಲ್ಲ. ಆತ್ಮ ಎಂದರೇ ಮಾಡುವುದು, ಮಾಡಿಸುವುದು ಎಂದು ಎರಡು ಕಾರ್ಯಗಳು ಏಕ ಕಾಲದಲ್ಲಿ ಮಾಡುವುದು. ಆತ್ಮ ಎಂದರೇ! ಯಾವಾಗಲೂ ಪರಮಾತ್ಮನೊಂದಿಗೆ ಜೊತೆಗಿರುವುದು. ಅಂದರೆ ಯಾವಾಗಲೂ ದೇವರೊಂದಿಗೆ ಬೆರೆತು ಬಂಧಿಸಲ್ಪಟ್ಟಿರುವುದು. ಆತ್ಮ ಎಂದರೆ! ಯಾವಾಗಲೂ ಜೀವಾತ್ಮದೊಂದಿಗೆ ಜೊತೆಗಿರುವುದು. ಅಂದರೆ ಶಾಶ್ವತವಾಗಿ ಜೀವಾತ್ಮದೊಂದಿಗೆ ಬೆರೆತಿರುವುದು ಎನ್ನುವ ಭಾವನೆ ಇದೆ. ಇನ್ನೂ ಹೇಳುತ್ತಾ ಹೋದರೆ ಆತ್ಮವೊಂದರ ನಿಜಸ್ಥಿತಿ ಎಷ್ಟೋ ಇದೆ. ಎಷ್ಟು ಅಗೆದಂತೆಲ್ಲಾ ತಿಳಿಯಬಹುದು. ಕರ್ಮದೊಂದಿಗೆ ಇರುವ ಜೀವಾತ್ಮನನ್ನು ಕುರಿತು ಪೂರ್ತಿ ಹೇಳಬಲ್ಲೆವು. ಅಣುಅಣುವಿನಲ್ಲೂ ವ್ಯಾಪಿಸಿರುವ ಪರಮಾತ್ಮನನ್ನು ಕುರಿತಿರುವ ಜ್ಞಾನಕ್ಕೆ ಅಂತ್ಯವಿದೆ. ಆದರೇ ಶರೀರಗಳೆಲ್ಲವುಗಳಲ್ಲಿ ಒಂದೇ ವಿಧವಾಗಿ, ಒಂದೇ ಉದ್ದೇಶದಿಂದ, ಒಂದೇ ಜ್ಞಾನದಿಂದಿರುವ ಆತ್ಮವನ್ನು ಕುರಿತು ಪೂರ್ತಿಯಾಗಿ

ಹೇಳಲಾರೆವು. ಏಕೆಂದರೇ! ಜೀವಾತ್ಮ ಸ್ವಭಾವ ಮತ್ತು ಪರಮಾತ್ಮ ಭಾವನೆಯನ್ನು ಎರಡನ್ನೂ ಆತ್ಮ ಒಂದೇ ಕಾಲದಲ್ಲಿ ಹೊಂದಿರುತ್ತದೆ. ಆದ್ದರಿಂದ ಇತ್ತ ಪರಮಾತ್ಮನನ್ನು ತಿಳಿದರೂ, ಆತ್ಮನನ್ನು ಕುರಿತಿರುವ ಸತ್ಯವನ್ನು ತಿಳಿಯಲಾರೆವು. ಹಾಗೆಯೇ ಜೀವಿಯನ್ನು (ಜೀವಾತ್ಮನನ್ನು) ಕುರಿತು ಸಂಪೂರ್ಣವಾಗಿ ತಿಳಿದರೂ ಆತ್ಮನನ್ನು ಕುರಿತಿರುವ ಅಸಲಾದ ಅನುಭವವನ್ನು ತಿಳಿಯಲಾರೆವು. ಪರಮಾತ್ಮ ಮತ್ತು ಜೀವಾತ್ಮದೊಂದಿಗೆ ಎಂದಿಗೂ ಬೆರೆತಿರುತ್ತದೆ, ಆದ್ದರಿಂದ ಮಧ್ಯ ಆತ್ಮವನ್ನು ಕುರಿತು, ಎರಡು ಅನುಭವಗಳೊಂದಿಗೆ ಕೂಡಿದ ಅನುಭವವನ್ನು ಕುರಿತು ಯಾರೂ ಹೇಳಲಾರರು. ಭೂಮಿ ಮೇಲೆ ಹುಟ್ಟಿರುವ ಯಾವ ಜೀವಾತ್ಮನು ಆತ್ಮನನ್ನು ಕುರಿತು ಪೂರ್ತಿಯಾಗಿ ಹೇಳಲಿಲ್ಲ.

**ಪ್ರಶ್ನೆ :– ನೀವು ಆತ್ಮನನ್ನು ಕುರಿತು ಯಾರೂ ಹೇಳಲಾರರು ಎಂದು ಹೇಳುತ್ತಲೇ ಆತ್ಮನನ್ನು ಕುರಿತಿರುವ ರಹಸ್ಯವೆಲ್ಲವೂ ಹೇಳುತ್ತಿದ್ದೀರಲ್ಲವೆ! ನೀವು ಹೇಳಿರುವುದರೊಂದಿಗೆ ಆತ್ಮನನ್ನು ಕುರಿತಾದ ರಹಸ್ಯವೆಲ್ಲವೂ ತಿಳಿಯುತ್ತಿದೆಯಲ್ಲ!**

**ಉತ್ತರ :–** ನಾನು ಹೇಳಿರುವುದರೊಂದಿಗೆ ಆತ್ಮ ವಿಷಯವೆಲ್ಲವೂ ಅರ್ಥವಾಗಿದ್ದರೇ ನೀನು ಪುನಃ ಮಾತನಾಡುವುದಿಲ್ಲ. ನಿಜ ಹೇಳಬೇಕೆಂದರೆ ಆತ್ಮನನ್ನು ಕುರಿತು ಸಂಪೂರ್ಣವಾಗಿ ತಿಳಿದವರು ಯಾರೂ ಮರುಕ್ಷಣವೇ ಶರೀರದೊಂದಿಗೆ ಇರದೇ, ಶರೀರವನ್ನು ಬಿಟ್ಟು ಮೋಕ್ಷವನ್ನು ಹೊಂದುವನು. ಮೋಕ್ಷವನ್ನು ಹೊಂದಬೇಕೆಂದರೇ ಪರಮಾತ್ಮ ಜ್ಞಾನ ತಿಳಿಯಬೇಕೆಂದು ಕೆಲವರು, ದೇವರನ್ನು ಕುರಿತು ಪೂರ್ತಿಯಾಗಿ ತಿಳಿಯಬೇಕೆಂದು ಕೆಲವರು ಹೇಳುತ್ತಿರುವರು. ಇನ್ನೂ ಜೀವಿಯ ಕರ್ಮವೆಲ್ಲವೂ ಮುಗಿದು ಹೋದ ನಂತರ ಜೀವಿಯು ಮೋಕ್ಷವನ್ನು ಹೊಂದುವನೆಂದು ಹೇಳುತ್ತಿರುವರು. ನನಗೆ ತಿಳಿದಿರುವ ಸತ್ಯ ತಿಳಿದರೇ ಯಾರೂ ಆ ಮಾತನ್ನು ಅನ್ನುವುದಿಲ್ಲ. ಏಕೆಂದರೇ! ಜೀವಿಯ ಕರ್ಮ ಪೂರ್ತಿಯಾಗಿ ಮುಗಿದುಹೋಗಬೇಕೆಂದರೇ ಅದು ಜೀವಿಯ ಕೈಯ್ಯಲ್ಲಿ ಇಲ್ಲ. ಅದು ಎಲ್ಲವೂ ಆತ್ಮಕೈಯ್ಯಲ್ಲೇ ಇದೆ. ಆತ್ಮ ತನಗೆ ಇಷ್ಟವಾದರೇನೆ ಕರ್ಮವನ್ನು ಪೂರ್ತಿಯಾಗಿ ದಹಿಸಬಲ್ಲದು. ಇಲ್ಲದೇ ಹೋದರೇ ಕರ್ಮವನ್ನು ಸಶೇಷ ಮಾಡುತ್ತಲೇ

ಇರುತ್ತದೆ. ಶೇಷ ಇಲ್ಲದಂತೆ ಜೀವಿಯ ಲೆಕ್ಕ ಮಾಡುವವನು ಆತ್ಮವೇ ಎಂದು ಮರೆಯಬಾರದು. ದೇವರಿಗೆ ಧರ್ಮವಿದೆ. ಆದರೇ ಆತ್ಮಕ್ಕೆ ಧರ್ಮ ಎನ್ನುವುದು ಇಲ್ಲ. ಆತ್ಮ ಧರ್ಮವೆಂದು ಬ್ರಹ್ಮವಿದ್ಯಾ ಶಾಸ್ತ್ರವನ್ನು ಹುಡುಕಿದರೂ, ಯಾವ ಪುಟದಲ್ಲೂ ಆತ್ಮವೊಂದರ ಧರ್ಮ ಕಾಣಿಸುವುದಿಲ್ಲ. ದೇವರ ಧರ್ಮಗಳು ಇವುಯೆಂದು ಹೇಳಬಹುದು. ಆದರೇ ಆತ್ಮ ಧರ್ಮವಿದುಯೆಂದು ಪ್ರಪಂಚದಲ್ಲಿ ಯಾರೂ ಹೇಳಲಾರನು. ಏಕೆಂದರೇ! ಆತ್ಮಕ್ಕೆ ಧರ್ಮಗಳು ಇಲ್ಲ. ಆತ್ಮ ಧರ್ಮಗಳಿಗೆ ಅತೀತವಾಗಿ ಇದೆ. ಆದ್ದರಿಂದ ಭಗವದ್ಗೀತಾ ಗ್ರಂಥದಲ್ಲಿ **ಮೋಕ್ಷ ಸನ್ನ್ಯಾಸ ಯೋಗ** ಎನ್ನುವ ಅಧ್ಯಾಯದ ಕೊನೆಯಲ್ಲಿ 61, 62, 63, 64, 65, 66 ಶ್ಲೋಕಗಳನ್ನು ನೋಡಿದರೆ ಈ ವಿಧವಾಗಿ ಇದೆ ನೋಡಿರಿ. 61, 62 ಶ್ಲೋಕಗಳ ನಂತರ ಅಂದರೆ 63ನೇ ಶ್ಲೋಕದಿಂದ ಭಗವದ್ಗೀತೆ ಪೂರ್ತಿ ಮುಗಿದುಹೋಗಿದೆ. ಅಲ್ಲಿಯವರೆಗು ಆತ್ಮ ಅಡಗಿ ತನ್ನನ್ನು ಕುರಿತು ಸ್ವಲ್ಪವಾದರೂ ಭಯಪಡದೇ, ಭಾವನೆಯಲ್ಲಿ ಎಲ್ಲರನ್ನೂ ತನ್ನವರೆಗು ಬಾರದಂತೆ ಮಾಡಿಕೊಂಡಿದೆ. ಆದರೇ ಕೊನೆಯಲ್ಲಿ ಇರುವ ಸತ್ಯವನ್ನು ತಿಳಿಸಿ ಮುಕ್ತಾಯ ಮಾಡಿದರೂ, ಯಾರ ದೃಷ್ಟಿ ತನ್ನಮೇಲೆ ಬೀಳದಂತೆ ಎಲ್ಲರ ದೃಷ್ಟಿಯನ್ನು ದೇವರಾದ ಪರಮಾತ್ಮ ಮೇಲೆಗೆ ಮರಳಿಸಿದೆ. ಈಗ ಈ ಚಿಕ್ಕ ಗ್ರಂಥವನ್ನು ಬರೆಯುತ್ತಿರುವ ನಾನು ನನ್ನ ಸ್ವಯಂ ರಚನೆಯಾದ **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯಲ್ಲಿ ಆರು ಶ್ಲೋಕಗಳ ವಿವರವನ್ನು ಬರೆದಿದ್ದೇನೆ. ಆದರೇ 61ನೇ ಶ್ಲೋಕದಲ್ಲಿ ಬರೆದ ವಿವರ ಆ ದಿನ ನನಗೆ ತಿಳಿದು, ನಾನು ಅಲ್ಲಿರುವ ಸತ್ಯವನ್ನು ಬರೆಯದೆ ಸ್ವಲ್ಪ ದಾರಿ ತಪ್ಪಿ ಬರೆಯುವುದಾಗಿದೆ. ಹಾಗೆ ತಿಳಿದು ದಾರಿ ತಪ್ಪಿಸಿ ಬರೆಯಬೇಕಾಗಿ ಬಂದಿದೆ. ನಾನು ದಾರಿ ತಪ್ಪಿಯಾದರೂ ನಿಮ್ಮ ದೃಷ್ಟಿನೆಲ್ಲವನ್ನೂ ಪರಮಾತ್ಮ ಮೇಲೆ ಹರಿಯುವಂತೆ ಮಾಡಿದ್ದೇನೆ. ಅಲ್ಲಿ ನಾನು ಮಾಡಿರುವುದು ರವೆಯಷ್ಟು ಸಹ ತಪ್ಪು ಇಲ್ಲವೆಂದು ಎಲ್ಲರಿಗೂ ತಿಳಿಯಬಲ್ಲದು. ಇನ್ನು 62ನೇ ಶ್ಲೋಕವೊಂದರ ಭಾವನೆಯಲ್ಲಿ ಸಹ ಅದೇ ಕೆಲಸವನ್ನು ಮಾಡಿದ್ದೇನೆ. ಇನ್ನು 63ನೇ ಶ್ಲೋಕದಲ್ಲಿ ಪ್ರತ್ಯೇಕಿಸಿ ಕೊನೆಯದಾಗಿ "ರಹಸ್ಯಗಳಿಗೆಲ್ಲಾ ರಹಸ್ಯವಾದ ಅದನ್ನು ಹೇಳುತ್ತಿದ್ದೇನೆಂದು" ಹೇಳಿ ಪ್ರಜೆಗಳ ದೃಷ್ಟಿಯನ್ನು ಸ್ವಲ್ಪ ದಾರಿಯೊಳಗೆ ತಂದು

ಹೇಳಿದಂತಾಗಿದೆ. ಅಲ್ಲಿ ಆ ಮಾತನ್ನು ಹೇಳಿದ ನಂತರ ಬರೆಯುವ ನಾವು ಎಷ್ಟೋ ಎಚ್ಚರದಿಂದ ಬರೆಯಬೇಕಾಗಿದೆ. ಅಷ್ಟೇ ಅಲ್ಲದೆ ಉಳಿದ ಕೊನೆಯಲ್ಲಿ ಉಳಿದ ಮೂರು ಶ್ಲೋಕಗಳನ್ನು ಕುರಿತು ಓದುವವರು ಎಷ್ಟೋ ಜಾಗ್ರತೆಯಾಗಿ ಓದಬೇಕಾಗಿದೆ. ಏಕೆಂದರೆ! ಕೊನೆಯದಾಗಿ ರಹಸ್ಯಗಳಲ್ಲೇ ದೊಡ್ಡ ರಹಸ್ಯವೆಂದು ಹೇಳಿರುವುದರಿಂದ ಭಗವದ್ಗೀತೆ ಗ್ರಂಥವನ್ನು ಓದಿದ ಶ್ರದ್ಧೆಗಿಂತ ಹೆಚ್ಚಿನ ಶ್ರದ್ಧೆ ಇಟ್ಟು ನೋಡಬೇಕಾಗಿದೆ. 64ನೇ ಶ್ಲೋಕದಲ್ಲಿ ಆಗ ಇರುವ ಶ್ರದ್ಧೆಗಿಂತ ಮತ್ತಷ್ಟು ಶ್ರದ್ಧೆಯನ್ನು ಇಟ್ಟು ನೋಡಿರೆಂದು ಎರಡನೆ ಬಾರಿ ಹೇಳಿದ್ದಾನೆ. ಇಲ್ಲಿಯವರೆಗು ಹೇಳಿದ ಸಾರಾಂಶವನ್ನು ಹೇಳುತ್ತಿದ್ದೇನೆ, ನೀನು ನನಗೆ ಇಷ್ಟವಾದವನಾಗಿರುವುದರಿಂದ ಹೇಳುತ್ತಿದ್ದೇನೆಂದು ಇನ್ನೂ ಜಾಗ್ರತೆಪಡಿಸಿದ್ದಾನೆ. ಅಂದರೇ ಕೊನೆಯಲ್ಲಿನ ಎರಡು ಶ್ಲೋಕಗಳು ಮುಖ್ಯವಾದವುಗಳಿಗೆಲ್ಲಾ ಮುಖ್ಯವಾದವೆಂದು ಅರ್ಥವಾಗುತ್ತಿದೆ. ಅಷ್ಟು ಮುಖ್ಯವಾದ ಎರಡು ಶ್ಲೋಕಗಳನ್ನು ನಾನು **"ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ"** ಬರೆಯುವುದು ನಡೆದಿದೆ. ಆದರೇ 61, 62 ಶ್ಲೋಕಗಳಲ್ಲಿ ಅದೇ ಕೆಲಸವಾಗಿ ದಾರಿ ತಪ್ಪಿಸಿ ಬರೆದಂತೆ ಇಲ್ಲಿ ಬರೆಯಲಿಲ್ಲ ಆದರೆ, 65, 66 ಶ್ಲೋಕಗಳಲ್ಲಿ ಸ್ವಲ್ಪಮಟ್ಟಿಗೆ ದಾರಿ ತೋರಿಸಿ ಹೇಳುವುದಾಗಿದೆ. ಆದರೂ ಪೂರ್ತಿ ಸತ್ಯವನ್ನು ಅಲ್ಲಿ ಎರಡು ಶ್ಲೋಕಗಳಲ್ಲಿ ಸಹ ಹೇಳಲಿಲ್ಲ. ಇದೆಲ್ಲವೂ ನನಗೆ ತಿಳಿದು ಬರೆದಿರುವುದೇಯೆಂದು ಈಗಲೂ ಸಹ ಹೇಳುತ್ತಿದ್ದೇನೆ. ಮುಖ್ಯವಾಗಿ ಹೇಳುವುದೇನೆಂದರೇ! ನಾನು ಕೊನೆಯಲ್ಲಿ ಹೇಳಿದ ಸಾರಾಂಶದಲ್ಲಿ ಪ್ರಜೆಗಳ ದೃಷ್ಟಿಯನ್ನು ಸ್ವಲ್ಪಮಟ್ಟಿಗೆ ಸತ್ಯದ ಕಡೆ ಮರಳಿಸಿ ಹೇಳಿದ್ದೇನೆ. ಸುಮಾರು ಮೂರು ಭಾಗ ಸತ್ಯವನ್ನು ಹೇಳಿದ್ದೇನೆ ಆದರೆ, ನನ್ನ ಧರ್ಮವನ್ನು ಅನುಸರಿಸಿ ಅದೇ ಕೆಲಸವಾಗಿ, ನಾಲ್ಕು ಭಾಗಗಳ ವಿವರದಲ್ಲಿ ಸುಮಾರು ಮೂರು ಪಟ್ಟು ಸತ್ಯಕ್ಕೆ ಹತ್ತಿರವಾಗಿ ತೆಗೆದುಕೊಂಡು ಹೋಗಿ, ಒಂದು ಪಟ್ಟು ಮಾತ್ರ ಸತ್ಯಕ್ಕೆ ದೂರವಾಗಿ ಮಾಡಿದ್ದೇನೆ. ಸ್ವಲ್ಪ ರಹಸ್ಯವನ್ನು ರಹಸ್ಯವಾಗಿಯೇ ಇರುವಂತೆ ಮಾಡಿದ್ದೇನೆ.

**ಪ್ರಶ್ನೆ :- ಇಲ್ಲಿಯವರೆಗು ನೀವೆಷ್ಟೋ ಸತ್ಯವಂತರೆಂದು ನಿಮ್ಮ ಮಾತುಗಳನ್ನು ಎಲ್ಲ ವಿಧಗಳಲ್ಲಿ ಒಪ್ಪಿಕೊಂಡವರಲ್ಲಿ ನಾನೂ ಒಬ್ಬನು. ಆದರೇ ನೀವೇ ಸ್ವತಃವಾಗಿ**

ಭಗವದ್ಗೀತೆ ಕೊನೆಯಲ್ಲಿ ಪ್ರಜೆಗಳನ್ನು ತಪ್ಪುದಾರಿ ಹಿಡಿಸಿದ್ದೇನೆಂದು ಹೇಳುವುದಲ್ಲದೆ, ಅದೇ ಕೆಲಸದಂತೆ ತಿಳಿದು ತಪ್ಪು ಭಾವನೆಯೊಳಗೆ ಹೋಗುವಂತೆ ಮಾಡಿದ್ದೇನೆಂದು ಹೇಳಿದ್ದೀರ. ನೀವು ಪ್ರಜೆಗಳಿಗೆ ಭಗವದ್ಗೀತೆ ಭಾವನೆಯನ್ನು ತಿಳಿಸಬೇಕೆನ್ನುವ ಉದ್ದೇಶದಿಂದ ಭಗವದ್ಗೀತೆಯನ್ನು 'ಸಿದ್ಧಾಂತ ಭಗವದ್ಗೀತೆ'ಯಾಗಿ ಬರೆದಿದ್ದೀರ. ನೀವು ಬರೆದ ಭಗವದ್ಗೀತೆ ಪ್ರಜೆಗಳು ಓದಿದ ನಂತರ ಇಲ್ಲಿಯವರೆಗೂ ತಿಳಿಯದ ಜ್ಞಾನ ರಹಸ್ಯಗಳು ಎಷ್ಟೋ ತಿಳಿದಿವೆಯೆಂದು ಸಂತೋಷಪಡುತ್ತಿದ್ದಾರೆ. ಭೂಮಿಮೇಲೆ ಯಾರೂ ಹೇಳದ ವಿವರವನ್ನು ನಾವು ತಿಳಿದು ಜ್ಞಾನ ಮಾರ್ಗದಲ್ಲಿ ಎಷ್ಟೋ ಮುಂದಕ್ಕೆ ಹೋಗಿದ್ದೇವೆಂದು ಸಂತೋಷಪಡುತ್ತಿದ್ದೇವೆ. ಇಲ್ಲಿಯವರೆಗು ಇತರರಿಗಿಂತ ನಮಗೆ ತಿಳಿದಿರುವುದೇ ಹೆಚ್ಚು ಎಂದು ನಾವು ಅಂದುಕೊಳ್ಳುತ್ತಿರುವಾಗ, ಜ್ಞಾನ ತಿಳಿದಿದೆಯೆಂದು ಎಷ್ಟೋ ತೃಪ್ತಿಯಾಗಿರುವಾಗ, ಭಗವದ್ಗೀತೆ ಕೊನೆಯಲ್ಲಿ ನಾನು ಪೂರ್ತಿ ಸತ್ಯವನ್ನು ಹೇಳಲಿಲ್ಲವೆಂದು ಹೇಳುವುದು ನಮಗೆ ವಿಚಿತ್ರವಾಗಿ ಇದೆ. ನಾವು ಭಗವದ್ಗೀತೆ ಕೊನೆಯಲ್ಲಿನ ಆರು ಶ್ಲೋಕಗಳನ್ನು ಪುನಃ ಜಾಗ್ರತೆಯಾಗಿ ನೋಡಬೇಕಾದ ಅವಶ್ಯಕವಿದೆಯೆಂದು ತಿಳಿದಿದೆ. ಆದರೂ ನಾವು ಅಲ್ಲಿ ನೋಡಿದರೂ! ನಮಗೇನು ತಿಳಿಯಬಲ್ಲದು? ಅದೇ ಕೆಲಸದಂತೆ ನೀವು ಬಿಟ್ಟಿರುವುದು ನಮಗೆ ತಿಳಿಯಬೇಕೆಂದರೇ ಪುನಃ ನಾವು ನಿಮ್ಮನ್ನು ಆಶ್ರಯಿಸಿ ಕೇಳಬೇಕಾಗಿದೆ.

ಭೂಮಿಮೇಲೆ ಯಾರಾದರೂ ತಾನು ಮಾಡಿದ ದೊಡ್ಡಸ್ತಿಕೆಯನ್ನು ಕುರಿತು ಹೇಳಿಕೊಳ್ಳುತ್ತಾರೆ ಆದರೆ, ಯಾರೂ ತಾನು ಮಾಡಿದ ಪೊರಪಾಟುಗಳಾಗಲೀ, ತಪ್ಪುಗಳಾಗಲೀ ಹೊರಗೆ ಹೇಳುವುದಿಲ್ಲ. ತಾನು ತಿಳಿಯದೆ ಮಾಡಿರುವುದು ತಪ್ಪೆಂದು ನಂತರ ತಿಳಿದರೂ ಅದನ್ನು ಹೊರಗೆ ಬಾರದಂತೆ ಜಾಗ್ರತೆಯಿಂದ ನೋಡಿ ಕೊಳ್ಳುತ್ತಾರೆ. ಆದರೇ ನೀವು ಸ್ವಲ್ಪವಾದರೂ ಬಚ್ಚಿಟ್ಟುಕೊಳ್ಳದೆ ನೀವು ಮಾಡಿದ ಪೊರಪಾಟನ್ನು ಹೇಳುವುದು ಒಂದು ವಿಧವಾಗಿ ದೊಡ್ಡತನವೆಂದೇ ಹೇಳಬಹುದು. ಅದೂ ತಿಳಿದು ಪ್ರಜೆಗಳಿಗೆ ಸತ್ಯವನ್ನು ಬಚ್ಚಿಟ್ಟಿದ್ದೇನೆಂದು ಹೇಳುವುದು ಇನ್ನೂ ವಿಚಿತ್ರ. ಈಗ ನಾವು ನಿಮ್ಮನ್ನು ಕೇಳುತ್ತಿರುವುದು ಏನೆಂದರೆ! ನೀವು ಆ ವಿಧವಾಗಿ ತಿಳಿದು ಏಕೆ ಹಾಗೆ ಮಾಡಿದ್ದೀರ? ಅಲ್ಲಿ ಏಕೆ ಹಾಗೆ ಮಾಡಿದ್ದಾರೋ ನಮಗೆ ತಿಳಿದಿಲ್ಲ. ಇಂದಿಗಾದರೂ ನೀವು ಸತ್ಯವನ್ನು ತಿಳಿಸುತ್ತೀರೆಂದು ಕೋರುತ್ತಿದ್ದೇವೆ.

**ಉತ್ತರ :–** ನೀವು ಹೇಳಿದಂತೆ ಯಾರು ತಪ್ಪು ಮಾಡಿದರೂ ತಮ್ಮ ತಪ್ಪನ್ನು ಹೊರಗಿಡುವುದಿಲ್ಲ. ಹಾಗೆ ಹೇಳಿದರೇ ತಮ್ಮ ಗೌರವ ತಗ್ಗುತ್ತದೆಂದು ಹೇಳುವುದಿಲ್ಲ. ಆದರೇ ಅಲ್ಲಿ ನಾನು ತಪ್ಪು ಮಾಡಲಿಲ್ಲ. ನನ್ನ ಧರ್ಮವನ್ನು ಅನುಸರಿಸಿ ಪ್ರವರ್ತಿಸುವುದು ನಡೆದಿದೆ. ನೀವು ನನ್ನನ್ನು ಎಷ್ಟು ದೊಡ್ಡದಾಗಿ ಭಾವಿಸಿ ಕೊಂಡರೂ, ನಾನು ಸಹ ಒಬ್ಬ ಜೀವಾತ್ಮನೇ. ನನಗೆ ಆತ್ಮ ರಹಸ್ಯ ತಿಳಿದರೂ, ನನ್ನ ಧರ್ಮದ ಪ್ರಕಾರ ಹೇಳಬಾರದು. ಒಂದುವೇಳೆ ಹೇಳಿದರೇ ನನ್ನ ಕರ್ಮವೆಲ್ಲವೂ ಶೇಷ ಇಲ್ಲದಂತೆ ಹೋಗುತ್ತದೆ. ನಂತರ ನಿಮ್ಮೊಂದಿಗೆ ಮಾತನಾಡುವುದಕ್ಕೆ ನಾನು ನಿಮ್ಮ ಮುಂದೆ ಇರುವುದಿಲ್ಲ. ಆದ್ದರಿಂದ ನಾನು ಭಗವದ್ಗೀತೆ ನಂತರ ನಿಮ್ಮೊಂದಿಗೆ ಪ್ರತ್ಯಕ್ಷವಾಗಿ ಮಾತನಾಡಿ ಹೇಳಬೇಕಾದ ಜ್ಞಾನ ಸಮಾಚಾರವನ್ನು ಎಷ್ಟೋ ಹೇಳಬೇಕೆನ್ನುವ ಉದ್ದೇಶದಿಂದಲೇ ಆ ದಿನ ಹಾಗೆ ಮಾಡಿದ್ದೇನೆಂದು ಹೇಳುತ್ತಿದ್ದೇನೆ. ಆದರೂ ಅದು ನನ್ನ ತಪ್ಪಲ್ಲ, ನನ್ನ ಹದ್ದನ್ನು ದಾಟಿ ನಾನು ಪ್ರವರ್ತಿಸಲಿಲ್ಲ. ನಾನು ಮಾಡಿರುವುದು ನನ್ನ ಧರ್ಮ, ಆದ್ದರಿಂದ ಅದು ನನ್ನ ತಪ್ಪಲ್ಲವೆಂದು ಈದಿನ ಸತ್ಯವನ್ನು ಹೇಳಿದ್ದೇನೆ. ಈಗ ಆ ರಹಸ್ಯವನ್ನು ನೀವು ಹೇಳಿರೆಂದು ಕೇಳಿದ್ದೀರ. ನೀವು ಕೇಳಿರುವುದು ಒಳ್ಳೆಯದೇ ಆದರೇ ನಾನು ಈಗಲೂ ಸಹ ಹೇಳುವುದಿಲ್ಲ. ಎಲ್ಲಾ ನಾನೇ ಹೇಳಿದರೇ ನೀವು ಹುಡುಕುವುದು ಏನಿದೆ! ನೀವು ಸ್ವಲ್ಪವಾದರೂ ಶ್ರಮಿಸಬೇಕು, ಆದ್ದರಿಂದ ಅಲ್ಲಿ ಕೊನೆಯ ಎರಡು ಶ್ಲೋಕಗಳ ವಿವರವನ್ನು ನಿಮಗೇ ಬಿಟ್ಟು ಹಾಕುತ್ತಿದ್ದೇನೆ. ಮೂರು ಭಾಗಗಳು ಹೇಳಿ ಒಂದು ಭಾಗದ ಜ್ಞಾನವನ್ನು ಮಾತ್ರ ಬಚ್ಚಿಡುವುದು ನಡೆದಿದೆ. ಆ ಒಂದು ಭಾಗವೂ ಸಹ ನೀವು ತಿಳಿಯದೇ ಹೋದರೇ ನೀವು ಮಾಡುವುದೇನಿರುತ್ತದೆ.! ನಾನು ಒಬ್ಬ ಜೀವಿಯಾಗಿ ನನ್ನ ಭಾಗದ ಜ್ಞಾನವನ್ನು ನಾನು ಹೇಳುವುದು ನಡೆದಿದೆ. ಈಗಲೂ ಕೂಡಾ ನನ್ನ ಹದ್ದನ್ನು ನಾನು ದಾಟುವುದಿಲ್ಲ. ನನ್ನ ಧರ್ಮದ ಪ್ರಕಾರ ನಾನು ನಡೆಯದೆ ತಪ್ಪುವುದಿಲ್ಲ. ಆದ್ದರಿಂದ ಆ ಕೊನೆಯ ಎರಡು ಶ್ಲೋಕಗಳ ವಿವರವನ್ನು ನೀವೇ ತಿಳಿಯಬೇಕಾಗಿರುತ್ತದೆ.

**ಪ್ರಶ್ನೆ :– "ನೀವು ಜೀವಾತ್ಮನೆಂದು ನಮ್ಮನ್ನು ಯಾಮಾರಿಸಿ ಅಸಲಾದ ಜ್ಞಾನವನ್ನು ಹೇಳದಂತೆ ತಪ್ಪಿಸಿಕೊಳ್ಳುತ್ತಿದ್ದೀರ" ಎಂದು ನಾವು ಅಂದುಕೊಳ್ಳುತ್ತಿದ್ದೇವೆ. ನಿಮ್ಮನ್ನು ನಾವು ಸಾಧಾರಣ ಜೀವಿಯಾಗಿ ಭಾವಿಸಿಕೊಳ್ಳುತ್ತಿಲ್ಲ. ಜ್ಞಾನವನ್ನು ಸಂಪೂರ್ಣವಾಗಿ ಹೇಳುವುದಕ್ಕೆ ಭುವಿಗೆ ಇಳಿದು ಬಂದ ಗುರುವಾಗಿ ಲೆಕ್ಕಿಸಿಕೊಂಡಿದ್ದೇವೆ. ನೀವು ಹೊರತು ನಮಗೆ ಜ್ಞಾನ ರಹಸ್ಯಗಳನ್ನು ಹೇಳುವವರು ಇಲ್ಲ. ಆದ್ದರಿಂದ ದಯೆಮಾಡಿ ಭಗವದ್ಗೀತೆಯಲ್ಲಿ ಕೊನೆಯ ಆರು ಶ್ಲೋಕಗಳಿಗೆ ಪೂರ್ತಿ ವಿವರವನ್ನು ತಿಳಿಸುತ್ತೀರೆಂದು ಕೋರುತ್ತಿದ್ದೇವೆ.**

**ಉತ್ತರ :–** ನೀವು ಎಷ್ಟು ಹೊಗಳಿದರೂ ನಾನು ಸಾಧಾರಣ ಜೀವಾತ್ಮನೇಯೆಂದು ನನಗೆ ತಿಳಿದಿದೆ. ನಾನು ಜೀವಾತ್ಮನಾಗಿ ಎಷ್ಟೋ ಅನುಭವಗಳನ್ನು ಅನುಭವಿಸುತ್ತಿದ್ದೇನೆ. ನನ್ನ ಅನುಭವಗಳನ್ನು ನೀವು ನೋಡಿದಂತಾದರೇ ನನ್ನನ್ನು ಜೀವಾತ್ಮಯೆಂದು ನೀವೇ ಹೇಳಬಲ್ಲಿರಿ. ಪ್ರಪಂಚ ವಿಷಯಗಳು ನಿತ್ಯ ಅನುಭವಗಳಾಗಿ ಇವೆ. ಅವುಗಳನ್ನು ಬಿಟ್ಟು ಪಕ್ಕದಲ್ಲಿಟ್ಟು ಜ್ಞಾನ ಮಾರ್ಗದಲ್ಲಿ ಉಂಟಾದ ಅನುಭವಗಳನ್ನು ಒಂದು, ಎರಡು ಹೇಳುತ್ತೇನೆ ಕೇಳು. ಬಹುಶಃ 1998 ಕೊನೆಯಲ್ಲಿ ಮತ್ತು 1999 ಪ್ರಾರಂಭದಲ್ಲಿ ನಾನು ತ್ರೈತಸಿದ್ಧಾಂತವನ್ನು ಆಧಾರ ಮಾಡಿಕೊಂಡು ಭಗವದ್ಗೀತೆಯನ್ನು ಬರೆಯುವುದು ನಡೆದಿದೆ. ಭಗವದ್ಗೀತೆಯನ್ನು ಸುಮಾರು ಮೂರು ತಿಂಗಳ ಕಾಲ ಬರೆಯುವುದು ನಡೆದಿದೆ. ಕೊನೆಯ ದಿನ ಭಗವದ್ಗೀತೆ ಕೊನೆಯ ಶ್ಲೋಕಗಳನ್ನು ಬರೆಯುತ್ತಿದ್ದೇವೆ. ಆ ದಿನ ಕೊನೆಯ ಆರು ಶ್ಲೋಕಗಳು ಬರೆಯುವುದು ನಡೆಯುತ್ತಿದೆ. ಭಗವದ್ಗೀತೆ ಕೊನೆಯ ಅಧ್ಯಾಯ ಮೋಕ್ಷ ಸನ್ಯಾಸ ಯೋಗ ಒಟ್ಟು 78 ಶ್ಲೋಕಗಳು ಇವೆ. ಆದರೇ ನಾವು ಬರೆದ ಭಗವದ್ಗೀತೆಯಲ್ಲಿ ಕೊನೆಯ ಶ್ಲೋಕ 66ನೆಯದಾಗಿದೆ. ಕೊನೆಯಲ್ಲಿನ ಆರು ಶ್ಲೋಕಗಳನ್ನು ಮೂರು ಭಾಗಗಳಾಗಿ ಮಾಡಿಕೊಂಡಿದ್ದೇವೆ. 61, 62 ಶ್ಲೋಕಗಳಲ್ಲಿನ ಭಾವನೆಯನ್ನು ಅದೇ ಕೆಲಸದಂತೆ ದಾರಿ ತಪ್ಪಿಸಿ ಬರೆದಿದ್ದೇವೆ. ಅದರಲ್ಲಿ ಸತ್ಯವನ್ನು ಸೂಚನೆಯಾಗಿ ಹೇಳಿ ಉಳಿದ ಭಾವನೆಯನ್ನು ಎಲ್ಲವನ್ನೂ ದೇವರ ಮೇಲೆ ಅಂದರೆ 'ಪರಮಾತ್ಮ' ಮೇಲೆ

ದೃಷ್ಟಿ ಮರಳಿಸಿ ಬರೆದಿದ್ದೇವೆ. ಅಲ್ಲಿ 61, 62 ಶ್ಲೋಕಗಳ ಬಳಿ ಎಷ್ಟೋ ಜಾಗ್ರತೆಯಿಂದ ಬರೆಯಬೇಕಾಗಿ ಬಂದಿದೆ. 63, 64 ಶ್ಲೋಕಗಳಲ್ಲಿ ಕೊನೆಯಲ್ಲಿ ಹೇಳುವ 65, 66 ಶ್ಲೋಕಗಳ ಪ್ರಾಮುಖ್ಯತೆಯನ್ನು ಕುರಿತು ಹೇಳುತ್ತಾ ರಹಸ್ಯಗಳಿಗೆಲ್ಲಾ ರಹಸ್ಯವನ್ನು ಹೇಳುತ್ತಿದ್ದೇನೆಂದು ಎರಡು ಶ್ಲೋಕಗಳ ಭಾವನೆಗಳಲ್ಲಿ ಹೇಳುವುದಾಗಿದೆ. ಕೊನೆಯ 65, 66 ಶ್ಲೋಕಗಳನ್ನು ಬರೆಯುತ್ತಿರುವಾಗ ಮೂರು ಭಾಗ ಸತ್ಯ ಒಂದು ಭಾಗ ಅಸತ್ಯವನ್ನು ಅಳತೆ ಮಾಡಿ ಹೇಳಬೇಕಾಗಿಬಂದಿದೆ. ಆಗ ಹೃದಯದಲ್ಲಿ ಸಂತೋಷವೋ ಅಥವಾ ದುಃಖವೊ ಹೇಳಲಾರೆವು ಆದರೆ ಯಾವುದೋ ಇರುತ್ತಿತ್ತು. ಆದರೂ ಜಾಗ್ರತೆಯಾಗಿ ಆ ಎರಡು ಶ್ಲೋಕಗಳಿಗೆ ಭಾವನೆಯನ್ನು ಹೇಳಿ ಭಗವದ್ಗೀತೆಯನ್ನು ಮುಗಿಸುವುದಾಗಿದೆ. ಯಾವಾಗಾದರೇ ಭಗವದ್ಗೀತೆಯಲ್ಲಿನ ಕೊನೆಯ ಎರಡು ಶ್ಲೋಕಗಳ ಭಾವನೆಯನ್ನು ಬರೆಯುವುದು ಮುಗಿದುಹೋಗಿದೆಯೋ, ಆಗ ನಾನು ಒಬ್ಬ ಜೀವಿಯು ಆಗಿರುವುದರಿಂದ ತಡೆಯಲಾಗದೆ ಹತ್ತು ನಿಮಿಷಗಳ ಕಾಲ ಅಳುವುದು ನಡೆದಿದೆ. ಏಕೆ ಅಳುತ್ತಿದ್ದೇವೋ ತಿಳಿದಿಲ್ಲ. ಯಾವುದೋ ತಿಳಿಯದ ಅನುಭೂತಿ ನನ್ನನ್ನು ಅಳುವುದಕ್ಕೆ ಗುರಿ ಮಾಡಿದೆ.

ಜ್ಞಾನ ವಿಷಯದಲ್ಲಿ ಆ ದಿನ ಹೇಗೆ ಅತ್ತಿದ್ದೇನೋ ನನಗೆ ಚೆನ್ನಾಗಿ ನೆನಪಿದೆ. ಅಂದಿಗೆ ಭಗವದ್ಗೀತೆ ನನಗೆ ಏಳನೆ ರಚನೆ ಎಂದುಕೊಳ್ಳುತ್ತೇನೆ. ನಂತರ ಇಲ್ಲಿಯವರೆಗು 68 ಗ್ರಂಥಗಳನ್ನು ಬರೆಯುವುದು ನಡೆದಿದೆ. ಈಗ ಈ ಚಿಕ್ಕ ಗ್ರಂಥದಿಂದ ಒಟ್ಟು 69 ಗ್ರಂಥಗಳು ಬರೆದಂತಾಗುತ್ತದೆ. ಈದಿನ 15–02–2016 ದಿನಾಂಕ ಸಂಜೆ ಆರು ಗಂಟೆಗಳ ಸಮಯದಲ್ಲಿ ಆತ್ಮನನ್ನು ಕುರಿತು ಬರೆಯುವಾಗ **"ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಆತ್ಮ ಧರ್ಮಗಳನ್ನು ಕುರಿತು ಹುಡುಕಿದರೂ ಯಾವ ಪುಟದಲ್ಲಿಯೂ ಸಿಗುವುದಿಲ್ಲ. ದೇವರಿಗೆ ಧರ್ಮಗಳಿವೆಯೆಂದು ಹೇಳಬಹುದು ಆದರೇ ಆತ್ಮಕ್ಕೆ ಧರ್ಮಗಳಿವೆಯೆಂದು ಪ್ರಪಂಚದಲ್ಲಿ ಯಾರೂ ಹೇಳಲಾರನು. ಏಕೆಂದರೆ! ಆತ್ಮಕ್ಕೆ ಧರ್ಮಗಳು ಇಲ್ಲ. ಆತ್ಮ ಧರ್ಮಗಳಿಗೆ ಅತೀತವಾಗಿ ಇದೆ"** ಎಂದು ಬರೆಯುವುದು ನಡೆದಿದೆ. ಈ ವಾಕ್ಯಗಳನ್ನು ಬರೆದ ಕೂಡಲೇ ನನಗೆ ತಿಳಿಯದಂತೆಯೇ ನನ್ನಲ್ಲಿ ಯಾವುದೋ ಅನುಭೂತಿ ಉಂಟಾಗಿ

ಬರೆಯುವುದನ್ನು ನಿಲ್ಲಿಸಿ ಸುಮಾರು ಹತ್ತು ನಿಮಿಷಗಳು ಅಳಬೇಕಾಯಿತು ಅಳು ಏಕೆ ಬರುತ್ತಿದೆಯೋ ಆಗ ತಿಳಿಯದಿದ್ದರೂ ನಂತರ ನಾನು ಜೀವಾತ್ಮನೇ ಅಲ್ಲವೆ! ಆದ್ದರಿಂದ ಯಾವುದೋ ಒಂದು ಅನುಭೂತಿ ಹೃದಯದಲ್ಲಿ ಉಂಟಾಗುತ್ತದೆ ಅಲ್ಲವೆ! ಆದ್ದರಿಂದ ಅಳು ಬಂದಿದೆ! ಎಂದು ಅಂದುಕೊಳ್ಳುವುದು ನಡೆದಿದೆ. 1999ನೇ ವರ್ಷ ಅತ್ತಿರುವುದು ನನಗೆ ಜ್ಞಾಪಕಕ್ಕೆ ಬಂದಿದೆ. ಆ ದಿನ ಉಂಟಾದ ಅನುಭೂತಿಗು ಈ ದಿನ ಉಂಟಾದ ಅನುಭೂತಿಗು ಯಾವ ಮಾತ್ರ ವ್ಯತ್ಯಾಸವಿಲ್ಲ. ಹಾಗೆ ನಡೆಯುವುದು ಸುಮಾರು ಹದಿನಾರು ಸಂವತ್ಸರಗಳ ನಂತರವೇಯೆಂದು ಜ್ಞಾಪಕ ಬಂದಿದೆ. ಇದೆಲ್ಲವೂ ನಡೆದ ಸತ್ಯ ಆಗಿರುವುದರಿಂದ ನಾನು ಸಾಧಾರಣ ಜೀವಾತ್ಮನೇ ಎಂದು ನಾನು ಮರೆಯುವುದಕ್ಕೆ ಅವಕಾಶವಿಲ್ಲ ಅಲ್ಲವೆ! ನೀವು ಹೇಗೆ ಹೊಗಳಿದರೂ ನಾನು ನನಗಿಂತ ದೊಡ್ಡವನು ಆಗಲಾರೆನು ಅಲ್ಲವೆ!

**ಪ್ರಶ್ನೆ :– ಭಗವದ್ಗೀತೆಯಲ್ಲಿ ಮೋಕ್ಷಸನ್ಯಾಸ ಯೋಗವೆನ್ನುವ ಅಧ್ಯಾಯದ ಕೊನೆಯಲ್ಲಿ ಇರುವ ಆರು ಶ್ಲೋಕಗಳನ್ನು ಒಂದು ಸಲ ನಮಗೆ ತಿಳಿಸಬೇಕೆಂದು ಕೋರುತ್ತಿದ್ದೇವೆ.**

**ಉತ್ತರ :–** ನೀವು ಈಗ ಕೇಳಿದರೂ ನಾನು ಆಗ ಹೇಳಿದ ಭಾವನೆಯನ್ನೇ ಹೇಳುತ್ತೇನೆ ಹೊರತು ಬೇರೆ ಹೇಳುವುದು ಏನೂ ಇರುವುದಿಲ್ಲ. ಈಗ ಎರಡನೆ ಸಲ ನೋಡುವುದರಿಂದ ನಿಮ್ಮಲ್ಲಿ ಶ್ರದ್ಧೆ ಹೆಚ್ಚಾಗಿದ್ದರೇ ಅಂದಿಗಿಂತ ಸ್ವಲ್ಪ ಹೆಚ್ಚಿನ ಭಾವನೆಯನ್ನು ಗ್ರಹಿಸಬಲ್ಲರು. ನಾನು ಇಷ್ಟಾಗಿ ಹೇಳಿದ ನಂತರ ನೀವು ಎರಡನೆ ಸಲ ನಮ್ಮ ಭಾವನೆಯನ್ನು ನೋಡುವುದರಿಂದ ಎಷ್ಟೋ ಸ್ವಲ್ಪ ಒಳ್ಳೆಯದು ನಡೆಯುತ್ತದೆಂದು ಅಂದುಕೊಳ್ಳುತ್ತಿದ್ದೇನೆ.

**ಭಗವದ್ಗೀತೆ 18ನೇ ಅ. 61ನೇ ಶ್ಲೋ॥**

**ಶ್ಲೋ॥ ಈಶ್ವರ ಸ್ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥**

**(ಪರಮಾತ್ಮ)**

**ಭಾವಾರ್ಥ :–** ಸರ್ವ ಜೀವರಾಶಿಗಳ ಶರೀರ ಹೃದಯಗಳಲ್ಲಿ ಪರಮಾತ್ಮ ನೆಲೆಯೂರಿ, ಯಂತ್ರವನ್ನೇರಿ ಆಡಿಸುವವನಂತೆ ತನ್ನ ಮಾಯೆಯಿಂದ ಸರ್ವಭೂತಗಳನ್ನು ಆಡಿಸುತ್ತಿದ್ದಾನೆ.

**ವಿವರ :–** ಸರ್ವಜೀವರಾಶಿಗಳು ಅನೇಕ ವಿಧಗಳಾಗಿ ಕದಲುತ್ತಾ ಕೆಲವು ಆಡುತ್ತಿರುವಾಗ, ಕೆಲವು ಹೊಡೆದಾಡುತ್ತಿರುವಾಗ, ಕೆಲವು ರಮಿಸುತ್ತಿರುವಾಗ, ಕೆಲವು ಓಡುತ್ತಿರುವಾಗ, ಕೆಲವು ಎಗರುತ್ತಾ, ಕೆಲವು ದುಮುಕುತ್ತಿವೆ. ಹಾಗೆ ನಾನಾ ರೀತಿಗಳಾಗಿ ಕಾಣಿಸುವ ಜೀವರಾಶಿಗಳ ಶರೀರದಲ್ಲಿನ ಹೃದಿ ಸ್ಥಾನದಲ್ಲಿ ಪರಮಾತ್ಮ ನಿವಾಸವಿರುತ್ತಿದ್ದಾನೆ. ಶರೀರವೆಲ್ಲವೂ ನಾಡಿಗಳಿಂದ ವ್ಯಾಪಿಸಿ, ನಾಡಿಗಳಿಂದಲೇ ಕದಲಿಸಲ್ಪಡುತ್ತಿದೆ. ನಾಡಿಗಳೆಲ್ಲದಕ್ಕೂ ಕೇಂದ್ರ ಮೆದುಳು. ಮೆದುಳಿನಿಂದ ಬರುವ ಆದೇಶಗಳು ನಾಡಿಗಳ ಮೂಲಕ ಶರೀರವೆಲ್ಲವೂ ವ್ಯಾಪಿಸಿ ಶರೀರವನ್ನು ಕದಲಿಸಿ, ಆಡಿಸಿ, ಹಾಡಿಸಿ ಅನೇಕ ವಿಧಗಳಾಗಿ ಮಾಡುತ್ತಿವೆ. ಮೆದುಳಿನಿಂದ ಪ್ರಸಾರವಾಗುವ ಆದೇಶಗಳು ಎಲ್ಲಿಯವು? ಯಾರವು? ಎಂದು ಪ್ರಶ್ನೆ ಹಾಕಿಕೊಂಡರೆ, ಮೆದುಳು ಭಾಗವನ್ನೇ ಹೃದಯವೆನ್ನುತ್ತಿದ್ದೇವೆ ಅಲ್ಲವೆ! ಹೃದಯದಲ್ಲೇ ಪರಮಾತ್ಮ ಇದೆ. ಕರ್ಮಚಕ್ರದಲ್ಲಿನ ಕರ್ಮಾನುಸಾರ 'ಮಾಯೆ' ಎನ್ನುವ ಪರಿಕರಗಳಾದ ಬುದ್ಧಿ, ಚಿತ್ತ, ಮನಸ್ಸುನಿಂದ ಆದೇಶ ಕಳುಹಿಸುತ್ತಾ ಅದರ ಪ್ರಕಾರ ನರಗಳನ್ನು ಎಳೆದು ಶರೀರವನ್ನು ಆಡುವಂತೆ ಮಾಡುತ್ತಿದ್ದಾನೆ.

ಯಂತ್ರದ ಮೇಲೆ ಕೆಲಸ ಮಾಡುವವನು ಯಂತ್ರದ ಸ್ವಿಚ್‌ಗಳನ್ನು ತಿರುಗಿಸುತ್ತಾ ಯಂತ್ರದಿಂದ ಕೆಲಸ ಮಾಡಿಸಿದಂತೆ ದೇಹಾರೂಢನಾದ (ದೇಹವನ್ನೇರಿ ಇರುವವನಾದ) ಪರಮಾತ್ಮ ಒಟ್ಟು ಶರೀರವೆನ್ನುವ ಯಂತ್ರದಲ್ಲಿನ ಮನೋ, ಬುದ್ಧಿ, ಚಿತ್ತಗಳನ್ನು ಗುಣಗಳೊಂದಿಗೆ ಸರಿಪಡಿಸಿ ಇರುವ ಕರ್ಮಪ್ರಕಾರ ಆಡಿಸುತ್ತಿದ್ದಾನೆ. **ಪರಮಾತ್ಮ ಶರೀರವನ್ನು ಆಡಿಸುವುದಕ್ಕೆ ಆತ್ಮ ಎನ್ನುವ ವಿದ್ಯುತ್ತನ್ನು, ಮನೋ ಬುದ್ಧಿ ಚಿತ್ತಗಳನ್ನು ಮುಖ್ಯ ಅನುಬಂಧ ಸ್ವಿಚ್‌ಗಳನ್ನು, ಗುಣಗಳೆನ್ನುವ ಚಕ್ರಗಳನ್ನು, ಕರ್ಮಯೆನ್ನುವ ಪದ್ಧತಿಯನ್ನು ಉಪಯೋಗಿಸಿ ಕಷ್ಟ ಸುಖಗಳನ್ನು ಉತ್ಪಾದನೆಗಳನ್ನು ತಯಾರು ಮಾಡುತ್ತಿದ್ದಾನೆ.** ಈ ವಿಧಾನ

ತಿಳಿಯದವರು ಪರಮಾತ್ಮ ಶರೀರವನ್ನು ನಾಡಿಗಳಿಂದ ಗೊಂಬೆಯ ಹಾಗೆ ಆಡಿಸುತ್ತಿದ್ದಾನೆಂದು ಅಂದುಕೊಳ್ಳದೇ, ಎಲ್ಲದಕ್ಕೂ ತಾವೇ ಕಾರಣವೆಂದು ಅಜ್ಞಾನಿಗಳು ತಿಳಿಯುತ್ತಿದ್ದಾರೆ. ಪ್ರತಿ ಒಬ್ಬರಿಗೂ ಪ್ರತಿ ಕೆಲಸ ತಾವೇ ಮಾಡಿದಂತೇ ಅನಿಸುತ್ತಿರುತ್ತದೆ. ಏಕೆಂದರೇ! ಗೊಂಬೆ ಆಟದಲ್ಲಿ ಗೊಂಬೆಗಳನ್ನು ಆಡಿಸುವವನು ಕಾಣಿಸದೆ, ಗೊಂಬೆಗಳು ಕದಲುವುದು ಮಾತ್ರವೇ ಕಾಣಿಸಿದಂತೆ, ಮನುಷ್ಯನಿಂದ ನಡೆಯುತ್ತಿರುವ ಕಾರ್ಯಗಳಲ್ಲಿ ಒಳಗೆ ಆಡಿಸುವ ಪದ್ಧತಿಯಾಗಲೀ, ಆಡಿಸುವವನಾಗಲೀ ತಿಳಿಯದೆ, ಮೇಲ್ನೋಟಕ್ಕೆ ಆಡುವವರು ಮಾತ್ರವೇ ಕಾಣಿಸುತ್ತಿರುವುದರಿಂದ, ಪ್ರತಿ ಒಬ್ಬರೂ ತಮ್ಮಿಂದ ನಡೆಯುವ ಕೆಲಸಗಳನ್ನು ತಾವೇ ಮಾಡಿದಂತೆಂದುಕೊಳ್ಳುತ್ತಿದ್ದಾರೆ. ಪ್ರತಿ ಕದಲಿಕೆ ಪ್ರತಿ ಕೆಲಸ ನನ್ನದಲ್ಲ, ನಾನು ಮಾಡಲಿಲ್ಲ, ಪರಮಾತ್ಮ, ಆತ್ಮ (ಬಲ) ದಿಂದ ಇಂದ್ರಿಯಗಳು ಎನ್ನುವ ಶರೀರ ಭಾಗಗಳನ್ನು ಕರ್ಮಪ್ರಕಾರ ಕದಲಿಸುತ್ತಿದ್ದಾನೆಂದು, ತಾನು ಅದಕ್ಕೆ ಕಾರಣವಲ್ಲವೆಂದು ಯಾವನು ತಿಳಿಯುತ್ತಾನೋ, ಅವನು ಅಹಂವನ್ನು ಬಿಟ್ಟವನಾಗುತ್ತಿದ್ದಾನೆ. ಶರೀರದೊಂದಿಗೆ ಯಾವ ಕೆಲಸ ನಡೆದರೂ ಅದಕ್ಕೆ ತಾನು ಕರ್ತನಲ್ಲವೆಂದು ತಿಳಿದುಕೊಳ್ಳುತ್ತಿದ್ದಾನೆ. ಅದರಿಂದ ನಡೆಯುವ ಕೆಲಸಗಳಿಗು ಅವನಿಗೂ ಯಾವ ಸಂಬಂಧ ಇಲ್ಲವೆಂದು ಹೇಳಬಹುದು. ಈ ಸೂತ್ರದ ಪ್ರಕಾರ ಒಂದು ಶರೀರದಿಂದ ಲೋಕದಲ್ಲಿರುವವರೆಲ್ಲರೂ ಮರಣಿಸಲ್ಪಟ್ಟರೂ ಅದರಲ್ಲಿನ ಜೀವಿಯು ಹಂತಕನು ಅಲ್ಲವೆಂದು, ಅವನಿಗೆ ಪಾಪ ಅಂಟುವುದಿಲ್ಲವೆಂದು ಹೇಳಿದ್ದಾನೆ.

**ಭಗವದ್ಗೀತೆ 18ನೇ ಅ. 62ನೇ ಶ್ಲೋ॥**

**ಶ್ಲೋ॥ ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ।**
**ತತ್ಪ್ರಸಾದಾತ್ಪ ರಾಂಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥**

**(ಪರಮಾತ್ಮ)**

**ಭಾವಾರ್ಥ :–** ಸರ್ವ ಭಾವನೆಗಳಲ್ಲಿ ಪರಮಾತ್ಮನನ್ನು ಶರಣಬೇಡು. ಆತನ

ಅನುಗ್ರಹದಿಂದ ಪ್ರಕೃತಿಗಿಂತ ಅನ್ಯವಾದ ಶಾಂತಿಯನ್ನು ಮತ್ತು ಶಾಶ್ವತವಾದ ಮೋಕ್ಷ ಸ್ಥಾನವನ್ನು ಹೊಂದಬಹುದು.

**ವಿವರ :–** ಹೊರಗಿನ ಪ್ರಪಂಚದಲ್ಲಿ ಯಾರೆಷ್ಟು ಘನತೆ, ಗೌರವ ಹೊಂದಿದ್ದರೂ, ಒಳಗೆ ಪರಮಾತ್ಮದಿಂದಲೇ ಸರ್ವವೂ ನಡೆಯುತ್ತಿವೆಯೆಂದು ತಿಳಿದು, ಎಲ್ಲದಕ್ಕು ಮೂಲಕರ್ತನಾದ ಪರಮಾತ್ಮನನ್ನು ತನಗಿರುವ ಎಲ್ಲಾ ಮನೋಭಾವನೆಗಳ ಮೂಲಕ ಶರಣುಬೇಡಿ, ದೊಡ್ಡದಾಗಿ ತಿಳಿದು, ತನ್ನದೇನು ಇಲ್ಲವೆಂದು, ಇರುವುದೆಲ್ಲಾ ಪರಮಾತ್ಮದೆಯೆಂದು, ತಾನು ಪರಮಾತ್ಮ ಆಡಿಸಿದಂತೆ ಆಡುವ ಆಟದಗೊಂಬೆಯಂಥವನೆಂದು ತಿಳಿದು, ಆತನಗಿರುವ ಅನೇಕ ಅಂಶಗಳಲ್ಲಿ ಒಂದು ಅಂಶದಿಂದಲೇ ಸರ್ವ ಪ್ರಪಂಚವನ್ನು ನಡೆಸಬಲ್ಲ ದೊಡ್ಡವನೆಂದು, **"ನಾನು ಅಂದುಕೊಂಡರೆ ನೀನು ನೀನಾಗಿಯೇ ಇರುತ್ತೀಯಾ, ನಾನು ಅಂದುಕೊಂಡರೆ ನೀನು ಎಲ್ಲಾಕಡೆ ಇರುತ್ತೀಯಾ."** ಎನ್ನುವ ವಾಕ್ಯದ ಪ್ರಕಾರ ಆತನು ಅಂದುಕೊಂಡರೆ ಜೀವಿಯು ಜೀವಿಯಾಗಿಯೇ ಇರುತ್ತಾನೆಂದು, ಆತನು ಅಂದುಕೊಂಡರೆ ಜೀವಿಯು ಎಲ್ಲಾ ಕಡೆ ಅಣುಅಣುವಿನಲ್ಲಿ ವ್ಯಾಪಿಸಿ ಪರಮಾತ್ಮನಲ್ಲಿ ಐಕ್ಯವಾಗುತ್ತಾನೆಂದು ತಿಳಿದು ಕೈಮುಗಿಯುವುದರಿಂದ, ಆರಾಧಿಸುವುದರಿಂದ ಎಲ್ಲಿಯಾದರಾಗಲಿ ಪರಮಾತ್ಮ ಅನುಗ್ರಹ ಹೊಂದಿ, ಆತನು ಪ್ರಸಾದಿಸುವ ಶಾಂತಿಯನ್ನು ಹೊಂದಿ, ಪ್ರಕೃತಿಗಿಂತ ಅನ್ಯವಾದ ಮೋಕ್ಷವನ್ನು (ಪರಮಾತ್ಮನನ್ನು) ಹೊಂದಬಲ್ಲನು.

**ಭಗವದ್ಗೀತೆ 18ನೇ ಅ. 63ನೇ ಶ್ಲೋ॥**

**ಶ್ಲೋ॥ ಇತಿತೇ ಜ್ಞಾನ ಮಾಖ್ಯಾತಂ ಗುಹ್ಯದ್ಗುಹ್ಯತರಂ ಮಯಾ।**
**ವಿಮೃಶ್ಯೈತ ದಶೇಷೇಣ ಯಥೇಚ್ಛಸಿ ತಥಾಕುರು॥**

**(ಜ್ಞಾನ)**

**ಭಾವಾರ್ಥ :–** ರಹಸ್ಯಗಳಿಗೆಲ್ಲಾ ಅತ್ಯಂತ ರಹಸ್ಯವಾದ ಜ್ಞಾನವನ್ನು ನಿನಗೆ ನಾನು ಹೇಳಿದ್ದೇನೆ. ಇದನ್ನು ಶೇಷವಿಲ್ಲದೆ ವಿವರಿಸಿಕೊಂಡು ನೋಡಿ ಹೇಗೆ ನಿನಗೆ ಇಷ್ಟವೊ ಹಾಗೆ ಮಾಡು.

**ವಿವರ :–** ಇಲ್ಲಿಯವರೆಗು ಭಗವಂತನಿಂದ ಹೇಳಲ್ಪಟ್ಟ ಜ್ಞಾನ ಬಹಳ ರಹಸ್ಯವಾದುದು. ಒಂದು ವಿಧವಾಗಿ ಬಿಚ್ಚಿ ಹೇಳಿದರೂ ಅರ್ಥವಾಗದಿರುವುದು. ಪರಮಾತ್ಮಗೆ ಹೊರತು ಯಾರಿಗೂ ತಿಳಿಯದಿರುವುದು. ಪರಮಾತ್ಮ ಮುಖಾಂತರ ಕೇಳಿದರೂ ಕೆಲವರಿಗೆ ಅರ್ಥವಾಗದೆ ರಹಸ್ಯವಾಗಿಯೇ ಇರುತ್ತದೆ. ಆದ್ದರಿಂದ ರಹಸ್ಯಗಳಿಗೆಲ್ಲಾ ರಹಸ್ಯವಾದುದೆಂದು ಹೇಳಬಹುದು. ಇಂತಹ ಶ್ರೇಷ್ಠವಾದ ಜ್ಞಾನವನ್ನು ತಿಳಿಯಬೇಕೆಂದರೂ, ಎಷ್ಟೋ ಜನ್ಮಗಳು ಜ್ಞಾನಸಂಬಂಧ ಸುಕೃತವಿದ್ದರೇನೆ ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಈ ಜ್ಞಾನ ನಿಮ್ಮ ಹತ್ತಿರಕ್ಕೇ ಬರುವುದಿಲ್ಲ. ಒಂದುವೇಳೆ ಈ ವಿವರಗಳು ಹತ್ತಿರಕ್ಕೆಬಂದರೂ ಓದುವವರೇ ದೂರವಾಗುತ್ತಾರೆ. ಇಷ್ಟು ವಿವರವಾಗಿ ಹೇಳಲ್ಪಟ್ಟಿರುವುದು ಹದ್ದುಗಳನ್ನು ಗೀಚಿ ತೋರಿಸಿದ ಗೀತೆಯನ್ನು ಯಾರಾದರೂ ಕೇಳಿದರೂ, ಓದಿದರೂ ಎಲ್ಲವನ್ನು ವಿಶಧೀಕರಿಸಿ ಚೆನ್ನಾಗಿ ಯೋಚಿಸಿ ಹೇಗೆ ನಿಮಗಿಷ್ಟವೊ ಹಾಗೆ ನಡೆದುಕೊಳ್ಳ ಬಹುದು. ಭಗವಂತನು ತಿಳಿಸುವ ಜ್ಞಾನವೆಲ್ಲವನ್ನು ತಿಳಿಸಿ, ಯಾರಿಗಾದರೂ ಹೀಗೆ ನಡೆದುಕೊಳ್ಳಿರೆಂದು ಬಲವಂತ ಮಾಡದೆ ನಿನ್ನ ಇಷ್ಟವೆಂದಿದ್ದಾನೆ. ಜ್ಞಾನ ಕರ್ಮಾತೀತವಾದುದು. ಜ್ಞಾನ ಕರ್ಮವನ್ನು ಅನುಸರಿಸಿ ನಿರ್ಣಯಿಸಲ್ಪಟ್ಟು ನಿನಗೆ ಅಂಟುವುದಲ್ಲ. ಜ್ಞಾನ ಶ್ರದ್ಧಾನುಸಾರ ಲಭ್ಯವಾಗುವುದು. ಶ್ರದ್ಧೆ ಯಾರ ಇಷ್ಟಾನುಸಾರ ಅವರಿಗೆ ಹುಟ್ಟುವುದು. ಸ್ವತಃವಾಗಿ ಹುಟ್ಟುವುದು (ಸ್ವಯಂಭೂ) ಶ್ರದ್ಧೆ ಆಗಿರುವುದರಿಂದ ನಿನ್ನ ಇಷ್ಟವೆಂದು ಹೇಳಿದ್ದಾನೆ.

ಭಗವಂತನು ಜ್ಞಾನ ಅಜ್ಞಾನ ಎಂದೂ, ಪ್ರಕೃತಿ ಪರಮಾತ್ಮ ಎಂದೂ, ಮಾಯ ಈಶ್ವರನು ಎಂದೂ ಎರಡು ಮಾರ್ಗಗಳು ಸೂಚಿಸಿ ನೀನು ಯಾವ ಮಾರ್ಗದಲ್ಲಿ ಹೋಗುತ್ತಿಯೋ ಹೋಗೆಂದಿದ್ದಾನೆ. ಆತನು ನಮ್ಮ ಮೇಲೆಯೇ ಜವಾಬ್ದಾರಿಯನ್ನು ಇಟ್ಟರೂ, ನಿಜ ಜ್ಞಾನ ತಿಳಿದವನು 'ನಾನು' ಎನ್ನುವ ಅಹಮ್‌ನನ್ನು ಹೊಂದದೆ, ನನ್ನ ಇಷ್ಟವೆಂದು ಮೋಹದಲ್ಲಿಬೀಳದೆ, ಸರ್ವವೂ ಪರಮಾತ್ಮನೇಯೆಂದು ನಂಬಿ ಭಕ್ತಿಯೆಲ್ಲವೂ ಆತನ ಮೇಲೆ ತೋರಿಸುತ್ತಾ

ಶರಣಹೊಂದಿದರೆ, ಆತನು ಮತ್ತು ಆತನ ಜ್ಞಾನ ಸುಲಭವಾಗಿ ಅರ್ಥವಾಗುತ್ತದೆ. ಅಂತಹ ಶರಣ್ಯವಿಲ್ಲದೆ ನನ್ನ ಬುದ್ಧಿಯನ್ನು ಉಪಯೋಗಿಸಿ ಜ್ಞಾನ ತಿಳಿದುಕೊಳ್ಳುತ್ತೇನೆಂದುಕೊಳ್ಳುವುದು ಕೂಡಾ ತಪ್ಪಾಗುತ್ತದೆ. ಹಾಗೆ ಪರಮಾತ್ಮ ಜ್ಞಾನ ತಿಳಿದುಕೊಳ್ಳುವುದಕ್ಕೆ ಬಹಳ ಕಾಲ ಬೇಕಾಗುತ್ತದೆ. ಶರಣುಬೇಡಿದವನಿಗೆ ಬೇಗನೇ ಜ್ಞಾನ ಲಭ್ಯವಾಗುವುದೇ ಅಲ್ಲದೆ ಆ ಜನ್ಮದಲ್ಲಿಯೇ ಮೋಕ್ಷ ದೊರೆಯುತ್ತದೆ.

**ಭಗವದ್ಗೀತೆ 18ನೇ ಅ. 64ನೇ ಶ್ಲೋ॥**

**ಶ್ಲೋ॥ ಸರ್ವಗುಹ್ಯತಮಂ ಭೂಯ ಶ್ರೃಣು ಮೇ ಪರಮಂ ವಚಃ ।**
**ಇಷ್ಟೋ ಸಿಮೇದೃಢಮಿತಿ ತತೋ ವಕ್ಷ್ಯಾಮಿ ತೇ ವೊತಮ್ ॥**

**(ಗೀತಾ ಸಾರಾಂಶ)**

**ಭಾವಾಥ:–** ಸರ್ವ ರಹಸ್ಯಗಳಿಗೆಲ್ಲ ಉತ್ತಮವಾದ ಪರಮವಚನ ಸಮುದಾಯವನ್ನು ಪುನಃ ಕೇಳು. ನೀನು ನನಗೆ ಹೆಚ್ಚು ಇಷ್ಟವಾದವನಾದ್ದರಿಂದ ಹಿತವನ್ನು ಕೋರಿ ಹೇಳುತ್ತಿದ್ದೇನೆ.

**ವಿವರಣೆ :–** ವಾಸ್ತವಕ್ಕೆ ಮೊದಲು ಹೇಳಿದ 63 ನೇ ಶ್ಲೋಕದಿಂದಲೇ ಭಗವದ್ಗೀತೆ ಮುಗಿದುಹೋದರೂ ನಿಜಕ್ಕೆ ನಮ್ಮ ಹಿತವನ್ನು ಕೋರಿ ಗೀತೆವೊಂದರ ಸಾರಾಂಶವನ್ನು ಎರಡು ಶ್ಲೋಕಗಳ ರೂಪವಾಗಿ ಭಗವಂತನು ಹೇಳಿದ್ದಾನೆ. ಅವುಗಳಿಗಿಂತ ಮುಂದಿರುವ ಈ ಶ್ಲೋಕದಲ್ಲಿ ನೀನು ನನಗೆ ಇಷ್ಟವಾದವನೆಂದು, ನಿನ್ನ ಒಳ್ಳೆಯದನ್ನು ಬಯಸಿ ಎಂದು ಹೇಳುವುದು ವಿಶೇಷ. ಪರಮಾತ್ಮ ಯಾವುದಕ್ಕೂ ಕೆಲಸಕ್ಕೆಬಾರದ ನಮ್ಮನ್ನು ದೊಡ್ಡದಾಗಿ ಗುರುತಿಸಿ ಹಾಗೆ ಹೇಳಿದ್ದಾನೆಂದರೆ ಆತನಲ್ಲಿನ ದೊಡ್ಡತನವೇನೊ ಹೇಳುವಂಥವಲ್ಲ. ಆತನು ಅಷ್ಟಾಗಿ ಕೊನೆಯಲ್ಲಿ ನಮ್ಮ ಮೇಲೆ ಶ್ರದ್ಧೆಯಿಟ್ಟು ಹೇಳಿದ ಗೀತೆ ಒಟ್ಟಾರೆ ಸಾರಾಂಶವೇನೊ ಕೇಳಗೆ ನೋಡೋಣ.

**ಭಗವದ್ಗೀತೆ 18 ಅ. 65ನೇ ಶ್ಲೋ॥**

**ಶ್ಲೋ॥ ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೊಸಿಮೇ ॥**

**(ಗೀತಾ ಸಾರಾಂಶ)**

**ಭಾವಾರ್ಥ :–** ನನ್ನನ್ನು ನಿನ್ನ ಮನಸ್ಸಿನಲ್ಲಿ ಸ್ಮರಿಸಿಕೊ. ನೀನು ನನ್ನ ಭಕ್ತನಾಗಿರು. ನನ್ನನ್ನೇ ಪೂಜಿಸು. ನನ್ನನ್ನೇ ನಮಸ್ಕರಿಸು. ನನ್ನನ್ನೇ ಹೊಂದಬಲ್ಲೆ. ಇದು ಸತ್ಯ. ನೀನು ನನಗೆ ಹೆಚ್ಚು ಪ್ರಿಯನು ಆಗುತ್ತೀಯಾ. ಪ್ರತಿಜ್ಞೆ ಮಾಡಿ ಹೇಳುತ್ತಿದ್ದೇನೆ.

**ವಿವರಣೆ :–** ಯಾರಾದರೆ ಪರಮಾತ್ಮನನ್ನು ಮನಸ್ಸಿನಲ್ಲಿ ಜ್ಞಾಪಿಸಿಕೊಳ್ಳುತ್ತಿರುತ್ತಾನೊ, ಪರಮಾತ್ಮನಿಗೆ ಭಕ್ತನಾಗಿರುತ್ತಾ ಆತನನ್ನೇ ಪೂಜಿಸಿ, ನಮಸ್ಕರಿಸುತ್ತಿದ್ದಾನೋ ಅವನು ಪರಮಾತ್ಮನನ್ನೇ ಹೊಂದಬಲ್ಲನು. ಅವನೇ ಪರಮಾತ್ಮಗೆ ಹೆಚ್ಚಿನ ಪ್ರಿಯನು. ಆ ಮಾತು ನಿಜ. ಅಷ್ಟು ದೊಡ್ಡ ಪರಮಾತ್ಮನಿಗೆ ಇಷ್ಟು ಚಿಕ್ಕವನು ಪ್ರಿಯನಾ! ಎನ್ನುವ ಅನುಮಾನ ಇಟ್ಟುಕೊಳ್ಳಬೇಕಾದ ಅವಶ್ಯಕತೆಯಿಲ್ಲ. ಏಕೆಂದರೆ! ಪರಮಾತ್ಮನೇ ಸ್ವತಃವಾಗಿ ಪ್ರತಿಜ್ಞೆ ಮಾಡಿ ಹೇಳಿದ್ದಾನೆ.

ಪರಮಾತ್ಮ ನಿರಾಕಾರವಾಗಿ ಇರುವಾಗಾಗಲಿ, ಅಥವಾ ಪರಮಾತ್ಮ ಸಾಕಾರ ರೂಪದಲ್ಲಿ ಇರುವಾಗಾಗಲಿ ಆತನ ಮೇಲೇ ಭಕ್ತಿ, ಆತನ ಮೇಲೇ ಆರಾಧನೆ, ಆತನ ಮೇಲೆಯೇ ನಮಸ್ಕಾರ, ಆತನ ಮೇಲೆಯೇ ಮನೋಧ್ಯಾಸ ಹೊಂದಿರುವುದೇ ಮಹಾಭಾಗ್ಯವಾಗುತ್ತದೆ. ಅವನ ಪದ್ಧತಿಯೇ ಅವನನ್ನು ಪರಮಾತ್ಮನಿಗೆ ಪ್ರಿಯನನ್ನು ಮಾಡಿ ಆತನ ಸನ್ನಿಧಿಗೆ ಸೇರಿಸುತ್ತದೆ. ಇದು ಎಷ್ಟೋ ಸಾರಾಂಶವಾದ ಸಂದೇಶ.

**ಭಗವದ್ಗೀತೆ 18 ಅ. 66ನೇ ಶ್ಲೋ॥**

**ಶ್ಲೋ॥ ಸರ್ವಧರ್ಮಾನ್ ಪರಿತ್ಯಜ್ಯ ಮಾ ಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥**

**(ಗೀತಾ ಸಾರಾಂಶ)**

**ಭಾವಾರ್ಥ :–** ಸರ್ವ ಧರ್ಮಗಳನ್ನು ಸಂಪೂರ್ಣವಾಗಿ ಬಿಟ್ಟು ನನ್ನನ್ನು ಮಾತ್ರವೇ ನೀನು ಶರಣುಕೋರು. ನಿನ್ನನ್ನು ಪಾಪನಿಯಚಂಬುಗಳಿಂದ ಮುಕ್ತನನ್ನು ಮಾಡುತ್ತೇನೆ. ದುಃಖಿಸಬೇಡ.

**ವಿವರಣೆ :–** ಭಗವದ್ಗೀತೆ ಎಲ್ಲವೂ ಧರ್ಮಗಳು ಬೋಧಿಸಿ, ಅವುಗಳಿಂದಲೇ ಕರ್ಮಯೋಗ, ಬ್ರಹ್ಮಯೋಗವನ್ನು ಸೂಚಿಸಿ, ಆ ಎರಡು ಯೋಗಗಳ ಮೂಲಕ ಕರ್ಮವನ್ನು ನಾಶ ಮಾಡಿಕೊಂಡು ಮೋಕ್ಷ ಹೊಂದಲು ಹೇಳಿದ ಭಗವಂತನು, ಗೀತೆ ಒಟ್ಟಾರೆ ಸಾರಾಂಶದಲ್ಲಿ ಇಲ್ಲಿಯವರೆಗು ಹೇಳಿದ ಯೋಗಧರ್ಮಗಳನ್ನು ಬಿಟ್ಟು ನನ್ನನ್ನೇ ಶರಣು ಹೊಂದಿರೆಂದಿದ್ದಾನೆ. ಎರಡು ಯೋಗ ಪದ್ಧತಿಗಳು ಪರಮಾತ್ಮನನ್ನು ಸೇರಿಸುವ ಮಾರ್ಗಗಳು ಆಗಿದ್ದು, ಕೊನೆಯಲ್ಲಿ ಹೇಳಿದ ಸಾರಾಂಶದಲ್ಲಿ **"ಸೂಕ್ಷ್ಮದಲ್ಲಿ ಮೋಕ್ಷವೆಂದು"** ಬಹಳ ಹತ್ತಿರ ದಾರಿಯಲ್ಲಿ ಪರಮಾತ್ಮನನ್ನು ಸೇರುವ ಉಪಾಯವನ್ನು ಹೇಳಿದ್ದಾನೆ. ಗೀತಾ ಸಾರಾಂಶವಾದ ಎರಡು ಶ್ಲೋಕಗಳಲ್ಲಿ ಮೊದಲು ಹೇಳಿರುವುದು ಪರಮಾತ್ಮ ಸಾಕಾರವಾಗಿ ಇರುವಾಗಲೇ ಅಲ್ಲದೆ, ನಿರಾಕಾರವಾಗಿ ಇರುವಾಗ ಕೂಡಾ ಆಚರಿಸಬೇಕಾದ ಭಕ್ತಿಮಾರ್ಗವನ್ನು ಬೋಧಿಸಿದಾಗ, ಇಲ್ಲಿ ಕೊನೆಯ ಮಾತಾಗಿ ಪರಮಾತ್ಮ ಕೇವಲ ಸಾಕಾರವಾಗಿ ಅಥವಾ ಭಗವಂತನಾಗಿ ಸಾಧಾರಣ ಮಾನವ ಆಕಾರದಲ್ಲಿ ಇರುವಾಗ, ಯಾವ ಗುರುತು ಇಲ್ಲದವನಾಗಿ ಕಂಡುಕೊಳ್ಳುವುದಕ್ಕೆ ಕಷ್ಟವಾದಾಗ ಕಂಡುಕೊಂಡರೂ, ಸ್ವಲ್ಪ ಅನುಮಾನವಿದ್ದರೂ, ಅದನ್ನು ದೊಡ್ಡದು ಮಾಡಿ ತನಗೆ ದೂರವಾಗಿ ಕಳಿಸುವ ಸಾಕಾರವನ್ನು ಅತಿ ಕಷ್ಟದ ಮೇಲೆ ತಿಳಿದು, **ಅನುಮಾನ ಇಲ್ಲದ ಭಕ್ತಿ ಇರುವವರಿಗೆ** ಹೇಳಿದ ಮಾತುಗಳೆಂದು ಗ್ರಹಿಸಬೇಕು.

ಸಾಕ್ಷ್ಯಾತ್ತು ಪರಮಾತ್ಮ ಆದ ಸಾಕಾರವನ್ನು ಕಂಡುಕೊಂಡವನಿಗೆ ಧರ್ಮಗಳಿಂದ ಕೂಡಾ ಕೆಲಸವಿಲ್ಲ. ಗೀತೆ ಉದ್ದಕ್ಕೂ ಕೇಳಿದ ಧರ್ಮಗಳನ್ನು ಕೂಡಾ ಬಿಟ್ಟು ಗೀತೆ ಕೊನೆಯಲ್ಲಿ ಪರಮಾತ್ಮನನ್ನು ಭಗವಂತನಾಗಿ ಶರಣು ಹೊಂದಿದವನನ್ನು, ಆತನು ಅವನ ಕರ್ಮವೆಲ್ಲವನ್ನು ಕ್ಷಮಿಸಿ ಇಲ್ಲದಂತೆ ಮಾಡಿ, ತನ್ನಲ್ಲಿಯೇ ಸೇರಿಸಿಕೊಳ್ಳುತ್ತಾನೆ. ಎರಡು ಯೋಗಗಳ ಮೂಲಕ ಕೆಲವು

ಜನ್ಮಗಳವರೆಗು ಮುಗಿಯದ ಕರ್ಮ, ಮೂರನೆಯದಾದ ಭಕ್ತಿಯೋಗದಿಂದ ಒಂದೇ ಜನ್ಮದಲ್ಲಿ ಮುಗಿದುಹೋಗಿ ಆ ಜನ್ಮದಲ್ಲಿಯೇ ಪರಮ ತಂದೆ, ಪರಲೋಕ ರಾಜ್ಯಾಧಿಪತಿಯಾದ ಪರಮಾತ್ಮನನ್ನು ಸೇರಬಹುದು. ಕರ್ಮಯೋಗ, ಬ್ರಹ್ಮಯೋಗಗಳ ಮೂಲಕ ಕರ್ಮ ಸುಟ್ಟುಹೋಗಬೇಕಾಗಿದೆ. ಆದರೆ ಕೊನೆಯಲ್ಲಿ ಹೇಳಿದ ಭಕ್ತಿಯೋಗದಲ್ಲಿ ಜ್ಞಾನಾಗ್ನಿ ಇಲ್ಲ, ಯೋಗ ಸಾಧನೆ ಇಲ್ಲ, ಯೋಗಿಯ ಕೃಷಿ ಇಲ್ಲ. ಕೇವಲ ಶರಣುಬೇಡಿ ತನ್ನನ್ನುತಾನು ಪೂರ್ತಿ ಸಮರ್ಪಿಸಿಕೊಂಡು ತಾನು ಶೂನ್ಯವಾಗಿ ನಿಂತುಹೋಗುವುದೇ. ಅಷ್ಟುಮಾತ್ರಕ್ಕೆ ಭಯಂಕರ ಕರ್ಮಗಳೆಲ್ಲ ನಿಷ್ಫಲವಾಗಿಹೋಗುತ್ತವೆ. ಪರಮಾತ್ಮನೇ ಸ್ವತಃವಾಗಿ ಕರ್ಮಗಳೆಲ್ಲವನ್ನು ಕ್ಷಮಿಸಿ ತನ್ನತ್ತಿರಕ್ಕೆ ಸೇರಿಸಿಕೊಳ್ಳುತ್ತಾನೆ.

**ಪ್ರಶ್ನೆ :– ಸೃಷ್ಠಿ ಆದಿಯಲ್ಲಿ ಆಕಾಶವಾಣಿ ಮೂಲಕ ಸೂರ್ಯನು ಜ್ಞಾನವನ್ನು ಕೇಳಿದ್ದಾನೆ ಎಂದಿದ್ದೀರಲ್ಲವೆ! ಇಲ್ಲಿಯವರೆಗು ನೀವು ಹೇಳಿದ ಸಮಾಚಾರ ಸಂಪೂರ್ಣವಾಗಿ ಸೂರ್ಯನಿಗಾದರೂ ಅರ್ಥವಾಗಿದೆಯಾ?**

**ಉತ್ತರ :–** ಸೂರ್ಯನು ಗ್ರಹಗಳಲ್ಲಿ ದೊಡ್ಡ ಗ್ರಹ ಆದರೂ ಆತನು ಕೂಡಾ ಒಬ್ಬ ಜೀವಿಯೇ. ದೇವರು ಹೇಳಿದ ಜ್ಞಾನವನ್ನು ಎಲ್ಲರಿಗಿಂತ ಹೆಚ್ಚಾಗಿ, ಎಲ್ಲರಿಗಿಂತ ಚೆನ್ನಾಗಿ ಗ್ರಹಿಸಿಕೊಂಡವನು ಸೂರ್ಯನೇ. ಆದರೆ ಭಗವದ್ಗೀತೆ ಕೊನೆಯ ಆರು ಶ್ಲೋಕಗಳನ್ನು ವ್ಯಾಸನು ಬರೆದಿದ್ದಾನೆ. ಸೂರ್ಯನು ಕೇಳಿದಾಗ ಆತನಿಗೆ ತಿಳಿದ ಜ್ಞಾನ ಭಗವದ್ಗೀತೆಯಾಗಿ ಇಲ್ಲ. ಸೂರ್ಯನು ಭೂಮಿಮೇಲೆ ಹೇಳಿದ ನಂತರ ಅದು ಭಗವದ್ಗೀತೆಯಾಗಿ ಬರೆಯಲ್ಪಟ್ಟಿದೆ. ಸೂರ್ಯನು ಮೊದಲು ಜ್ಞಾನವನ್ನು ಕೇಳಿಸಿಕೊಂಡ ನಂತರ ಅದನ್ನು ಕೆಲವು ವರ್ಷಗಳು ಮೆಲುಕು ಹಾಕಿಕೊಂಡು ದೇವರು ಹೇಳಿದ ಜ್ಞಾನದಲ್ಲಿನ ಸಂಪೂರ್ಣ ಭಾವನೆಯನ್ನು ತಿಳಿಯಲ್ಪಟ್ಟಿದ್ದಾನೆ. ಸೂರ್ಯನು ದೊಡ್ಡ ಗ್ರಹ ಆಗಿರುವುದರಿಂದ ಆತನು ಮೊದಲು ಎಲ್ಲಾ ತಿಳಿಯದಿದ್ದರೂ, ಕೆಲವು ವರ್ಷಗಳು ಮೆಲುಕು ಹಾಕಿಕೊಂಡು ನೋಡುವುದರಿಂದ, ಆತನಿಗೆ ದೈವಜ್ಞಾನ ಸಂಪೂರ್ಣವಾಗಿ ಅರ್ಥವಾಗಿದೆ. ಸೂರ್ಯನಿಗೆ ಅರ್ಥವಾದ ನಂತರವೇ ಆತನು ಎಲ್ಲರಿಗೂ

ತಿಳಿಸಿದ್ದಾನೆ. ತನ್ನೊಂದಿಗೆ ಆಕಾಶದಲ್ಲಿರುವ ಎಲ್ಲಾ ಗ್ರಹಗಳಿಗು, ಭೂತಗಳಿಗು ಜ್ಞಾನವನ್ನು ತಿಳಿಸುವುದಾಗಿದೆ. ಆಗಲೇ ಮಹಾಜ್ಞಾನಿಯಾದ ಜಿಬ್ರಯೇಲ್ ಗ್ರಹ ಕೂಡಾ ಜ್ಞಾನವನ್ನು ಸಂಪೂರ್ಣವಾಗಿ ತಿಳಿಯಲ್ಪಟ್ಟಿದೆ. ಕೆಲವು ವರ್ಷಗಳ ನಂತರ ಭೂಮಿಮೇಲೆ ತೆಲುಗು ಭಾಷೆ ಇರುವಾಗ, ಸೂರ್ಯನು ದಕ್ಷಿಣ ಭಾರತದೇಶದಲ್ಲಿ ಜ್ಞಾನವನ್ನು ತಿಳಿಸಲಾಗಿದೆ. ಸೂರ್ಯನು ತಿಳಿಸಿದ ಜ್ಞಾನವನ್ನೇ ದ್ವಾಪರ ಯುಗದಲ್ಲಿ ಅರ್ಜುನನಿಗೆ ಹೇಳಿದಾಗ ಆ ಸಮಾಚಾರ ಎಲ್ಲವನ್ನು ವ್ಯಾಸನಿಂದ ಭಗವದ್ಗೀತೆ ಗ್ರಂಥವಾಗಿ ಬರೆಯಲ್ಪಟ್ಟಿದೆ. ಜಿಬ್ರಯೇಲ್ ಗ್ರಹ ಭೂಮಿಮೇಲಿರುವ ಮುಹಮ್ಮದ್ ಪ್ರವಕ್ತರಿಗೆ ಸೂರ್ಯನು ಹೇಳಿದ ಜ್ಞಾನವನ್ನೇ ಹೇಳಿದಾಗ, ನಂತರ ಅದೇ ಜ್ಞಾನವೇ ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥವಾಗಿ ತಯಾರಾಗಿದೆ.

ಸೂರ್ಯನಿಂದ ಸೃಷ್ಠಿ ಆದಿಯಲ್ಲಿ ಆಕಾಶ ಹೇಳಿದ ಜ್ಞಾನ ಕೆಳಗೆ ಪ್ರಪಂಚವೆಲ್ಲಾ ವ್ಯಾಪಿಸಿರುವಾಗ, ಮೇಲೆ ವಿಶ್ವಾಂತರಾಳದವರೆಗು ವ್ಯಾಪಿಸಿದೆ. ಸೂರ್ಯನು ಸಂಪೂರ್ಣ ಜ್ಞಾನವನ್ನು ಗ್ರಹಿಸಿದವನಾಗಿ ದಕ್ಷಿಣ ಭಾರತ ದೇಶದಲ್ಲಿ ತನ್ನ ಜ್ಞಾನವನ್ನು ಮನು ಎನ್ನುವ ವ್ಯಕ್ತಿಗೆ ಹೇಳಿಹೋಗುವುದು ನಡೆದಿದೆ ಆದರೆ ಆ ದಿನಗಳಲ್ಲಿ ಭೂಮಿಮೇಲೆ ಏರ್ಪಟ್ಟ ಭಾಷೆ ಒಂದೇಒಂದು. ಆ ಒಂದು ಭಾಷೆಗೆ ಹೆಸರಿಲ್ಲ. ಎರಡನೆ ಭಾಷೆಯೇ ಭೂಮಿಮೇಲೆ ಇಲ್ಲದಿರುವಾಗ ಆಗಿರುವ ಭಾಷೆಗೆ ಹೆಸರು ಇಡಬೇಕಾದ ಅವಶ್ಯಕತೆ ಆ ದಿನ ಏರ್ಪಡಲಿಲ್ಲ. ಆದರೆ ಸೂರ್ಯನು 15 ಕೋಟಿ ಕಿಲೋಮಿಟರ್‌ಗಳ ದೂರದಿಂದ ಬಂದು ಜ್ಞಾನವನ್ನು ಹೇಳಿ ಆ ಭಾಷೆಗೆ ಸೂರ್ಯನೇ ಹೆಸರಿಟ್ಟು ಹೋಗಿದ್ದಾನೆ. ಸೂರ್ಯನು ದೇವರ ಜ್ಞಾನವನ್ನು ಚೆನ್ನಾಗಿ ಗ್ರಹಿಸಿದವನು, ಆದ್ದರಿಂದ ತಾನು ಮಾತನಾಡಿದ ಭಾಷೆ ಹೆಸರು ಕೂಡಾ ಜ್ಞಾನದಿಂದ ಕೂಡಿಕೊಂಡಿರಬೇಕೆಂದು ತಿಳಿದವನಾಗಿ, ಜ್ಞಾನಕ್ಕೆ ಗುರುತು ಇರುವಂತೆ ಹೆಸರನ್ನು ಇಡುವುದು ನಡೆದಿದೆ. ಈದಿನ ನಾವು ಮಾತನಾಡುವ ಭಾಷೆ ತೆಲುಗು ಭಾಷೆಯೆಂದು ಎಲ್ಲರಿಗೂ ತಿಳಿದಿದೆ. ಆದರೆ ಭಾಷೆಗೆ **"ತೆಲುಗು"** ಎಂದು ಹೆಸರು ಇಟ್ಟವನು ಸೂರ್ಯನೆಂದು

ಯಾರಿಗೂ ತಿಳಿದಿಲ್ಲ. ಈದಿನ ಸೂರ್ಯನಿಗಿರುವ ಹೆಸರುಗಳೆಲ್ಲ ತೆಲುಗು ಭಾಷೆಯೊಳಗಿನವೇ ಎಂದು ತಿಳಿಯಬೇಕು. ಸೂರ್ಯನು ಜ್ಞಾನವನ್ನು ಹೇಳಿ ಭಾಷೆಗೆ ಹೆಸರಿಟ್ಟುಹೋದ ನಂತರ, ಸೂರ್ಯನಿಗೆ ತೆಲುಗು ಭಾಷೆಯಲ್ಲಿ ಹೆಸರುಗಳು ಇಡಲಾಗಿದೆ. ಮೊದಲು ಭೂಮಿಮೇಲೆ ಜ್ಞಾನವನ್ನು ತಿಳಿಸಿದವನು ಸೂರ್ಯನೇ ಆದ್ದರಿಂದ ಆತನಿಗೆ 'ಆದಿತ್ಯ' ಎಂದು ಹೆಸರು ಬಂದಿದೆ. ಆದಿತ್ಯ ಎಂದು ಹೇಳಿದಾಗ ತೆಲುಗು ಭಾಷೆಯಲ್ಲಿ ಮೊದಲ ಗುರುವೆಂದು ಅರ್ಥ. ಪ್ರಪಂಚದಲ್ಲಿನ ಪ್ರಜೆಗಳೆಲ್ಲರಿಗೂ ಮೊದಲ ಗುರುವು ಸೂರ್ಯನೇಯೆಂದು ತಿಳಿಸುವ ಸಲುವಾಗಿ "ಆದಿತ್ಯ" ಎನ್ನುವ ಹೆಸರನ್ನು ಸೂರ್ಯನಿಗೆ ಮನುವೇ ನಾಮಕರಣ ಮಾಡಿದ್ದಾನೆ. ನಂತರ ಬಹಳ ಹೆಸರುಗಳು ಸೂರ್ಯನಿಗೆ ತೆಲುಗು ಭಾಷೆಯಲ್ಲಿಯೇ ತಯಾರಾಗಿವೆ.

**ಪ್ರಶ್ನೆ :– ಈ ದಿನ ನಾವು ಹೇಳಿಕೊಳ್ಳುವ "ತೆಲುಗು" ಎನ್ನುವ ಪದ ಸೂರ್ಯನು ಇಟ್ಟಿರುವ ಹೆಸರೆಂದು ಯಾರಿಗೂ ತಿಳಿದಿಲ್ಲ. ಭೂಮಿಮೇಲೆ ಇನ್ನೂ ಕೆಲವು ಭಾಷೆಗಳು ಬಂದಾಗ ಅವುಗಳಿಗೆ ಹೆಸರುಗಳು ಇಡುವುದು ನಡೆಯುತ್ತಿರುತ್ತದೆ ಅಲ್ಲವೆ! ಹಾಗೆ ಬೇರೆ ಭಾಷೆ ಭೂಮಿಮೇಲೆ ತಯಾರಾದ ನಂತರ ಮೊದಲ ಭಾಷೆಯಾಗಿರುವುದಕ್ಕೆ ತೆಲುಗು ಎಂದು ಹೆಸರು ಇಟ್ಟಿದ್ದಾರೆಂದು ಅಂದುಕೊಳ್ಳುತ್ತೇನೆ ಹಾಗೆ ಅಲ್ಲದೆ ಎರಡನೆ ಭಾಷೆಯಿಲ್ಲದಿರುವಾಗಲೇ ಮೊದಲ ಭಾಷೆಗೆ ಹೆಸರು ಇಟ್ಟಿದ್ದಾರಾ?**

**ಉತ್ತರ :–** ಭೂಮಿಮೇಲೆ ಯಾವುದು ಎರಡನೆ ಭಾಷೆ ಇಲ್ಲದಿರುವಾಗಲೇ ಮೊದಲ ಭಾಷೆಯಾದ ಅದಕ್ಕೆ ಸೂರ್ಯನು ತೆಲುಗು ಭಾಷೆಯೆಂದು ಹೆಸರು ಇಟ್ಟಿದ್ದಾನೆ. ಆದಿತ್ಯನಿಂದ ಹೆಸರು ಇಡಲಾದ ಆದಿಭಾಷೆ 'ತೆಲುಗು'. ಮೊದಲ ಭಾಷೆಯಲ್ಲಿಯೂ ಸೂರ್ಯನು (ಪ್ರಕಾಶಿಸುವವನು), ರವಿ (ಸುಡುವವನು), ಆದಿತ್ಯನು (ಮೊದಲ ಗುರುವು) ಆಗಿರುವವನು, ಆಕಾಶದಲ್ಲಿ ನಿವಾಸಿಸುವವನು, ದೈವಜ್ಞಾನವನ್ನು ಮೊದಲು ಗ್ರಹಿಸಿದವನಾದ ಸೂರ್ಯನು ಮೊದಲು ಮಾತನಾಡಿದ ಭಾಷೆ ಆಗಿರುವುದರಿಂದ, ಅದು ಜ್ಞಾನದಿಂದ ಕೂಡಿಕೊಂಡಿರುವ

ಹೆಸರನ್ನೇ ಸೂರ್ಯನು ಭಾಷೆಗೆ ಗುರುತಾಗಿ ಇಡುವುದು ನಡೆದಿದೆ. ಆದರೆ ಕೆಲವು ಯುಗಗಳ ಪರ್ಯಂತ ಮೇಲೆ ಸೂರ್ಯನಿದ್ದರೂ, ಕೆಳಗೆ ಆತನ ಹೆಸರು ಇಟ್ಟಿರುವ ಭಾಷೆಯಿದ್ದರೂ, ಸೂರ್ಯನು ಇಟ್ಟಿರುವ ಹೆಸರಿದು ಎಂದು ಯಾರಿಗೂ ಇಲ್ಲಿಯವರೆಗು ತಿಳಿದಿಲ್ಲ. ತೆಲುಗು ಭಾಷೆಗೆ ಹೆಸರಿಟ್ಟವನು ಸೂರ್ಯನೆಂದು ಕೂಡಾ ಯಾರಿಗೂ ತಿಳಿದಿಲ್ಲ. ಹೆಸರು ಇಟ್ಟವನು ಮೇಲೆ, ಹೆಸರಿಡಲ್ಪಟ್ಟ ಭಾಷೆ ಕೆಳಗೆ ಇದ್ದರೂ, ಹೆಸರಿಟ್ಟವನು ಮೊದಲ ಗುರುವಾದರೂ, ಹೆಸರಿಡಲ್ಪಟ್ಟ ಭಾಷೆ ದೊಡ್ಡ ಅರ್ಥದಿಂದ ಇದ್ದರೂ, ಆದಿಭಾಷೆ ಆದರೂ, ಇತ್ತ ಭಾಷೆ ವಿಷಯವಾಗಲಿ, ಅತ್ತ ಸೂರ್ಯನ ವಿಷಯವಾಗಲಿ ಸ್ವಲ್ಪವೂ ತಿಳಿಯದೆ ಹೋಗಿದೆ. ಈಗ ಮೇಲಿರುವ ಆದಿತ್ಯನನ್ನು ಕುರಿತು ತಿಳಿಯದಿದ್ದರೂ, ಕೆಳಗಿರುವ ಆದಿಭಾಷೆಯಾದ ತೆಲುಗು ಭಾಷೆಯನ್ನು ಕುರಿತು ತಿಳಿದುಕೊಳ್ಳೋಣ.

ಮನುಷ್ಯನಿಗೆ ಪ್ರಕೃತಿಯಿಂದ ತಯಾರಾದ ಶರೀರವಿರುವಾಗ, ಶರೀರದಲ್ಲಿ ಮೂರು ಆತ್ಮಗಳು ನಿವಾಸಿಸುತ್ತಿವೆ. ಅವುಗಳೇ ಭಗವದ್ಗೀತೆಯಲ್ಲಿ **ಕ್ಷರ ಪುರುಷನು, ಅಕ್ಷರ ಪುರುಷನು, ಪುರುಷೋತ್ತಮ** ಎಂದು ಹೇಳಲ್ಪಟ್ಟಿವೆ. ಇಂಜೀಲು ಗ್ರಂಥದಲ್ಲಿ ಕುಮಾರನು, ತಂದೆ, ಪರಿಶುದ್ಧಾತ್ಮಯೆಂದು ಮೂವರಾಗಿ ಹೇಳಲ್ಪಟ್ಟಿದ್ದಾರೆ. ಕೊನೆಯ ದೈವಗ್ರಂಥವಾದ ಖುರ್‌ಆನ್‌ನಲ್ಲಿ **ನಡೆಸಲ್ಪಡುವವನು, ನಡೆಸುವವನು, ಸಾಕ್ಷಿಯಾಗಿ ನೋಡುತ್ತಿರುವವನು** ಎಂದು ಮೂವರಾಗಿ ಹೇಳಲ್ಪಟ್ಟಿದ್ದಾರೆ. ಮೂರು ದೈವಗ್ರಂಥಗಳಲ್ಲಿ ಮೂರು ಮತದವರು ಓದುತ್ತಿದ್ದರೂ **ಈ ಮೂವರು ದೈವಜ್ಞಾನಕ್ಕೆ ಮುಖ್ಯವಾದ ಸೂತ್ರಧಾರಿಗಳು** ಎಂದು ತಿಳಿಯಲಾರದೆ ಹೋಗಿದ್ದಾರೆ. ಆಧ್ಯಾತ್ಮಿಕ ವಿದ್ಯೆಯೆಲ್ಲಾ ಈ ಮೂರು ಆತ್ಮಗಳ ಸುತ್ತಲೂ ತಿರುಗುತ್ತಿರುತ್ತದೆ. **ಪ್ರಪಂಚದಲ್ಲಿನ ಜ್ಞಾನಕ್ಕೆ ಮೂರು ಆತ್ಮಗಳೇ ಆಧಾರ.** ಹಿಂದೂ ಮತದಲ್ಲಿ ದೇವರು ಮೂರನೆ ಪರುಷನಾಗಿ ಹೇಳಲ್ಪಡುತ್ತಿದ್ದಾನೆ. ಕ್ರೈಸ್ತರಲ್ಲಿ ಪರಿಶುದ್ಧಾತ್ಮಯೆನ್ನುವ ಮೂರನೆ ಆತ್ಮವೇ ದೇವರಾಗಿದೆ. ಇಸ್ಲಾಮ್ ಮತದಲ್ಲಿ ಅಲ್ಲಾಹ್ ಎಂದು ಹೇಳಲ್ಪಡುವ ದೇವರು ಮನುಷ್ಯರ ಶರೀರದಲ್ಲಿಯೇ ಸಾಕ್ಷಿಯಾಗಿರುವವನೇ ಎಂದು ಅವರಿಗು ಕೂಡಾ ತಿಳಿದಿಲ್ಲ.

ಹಿಂದೂಗಳಾದವರು ಪರಮಾತ್ಮಯೆಂದು, ಅಥವಾ ದೇವರೆಂದು ಹೇಳಲ್ಪಡುವ ಮೂರನೆ ಆತ್ಮ (ಮೂರನೆ ಪುರುಷನು) ಮಾನವ ಶರೀರದಲ್ಲಿಯೇ ಇದ್ದಾನೆಂದು ತಿಳಿಯದೆ ಹೊರಗೆ ದೇವರನ್ನು ಹುಡುಕುತ್ತಿದ್ದಾರೆ. ನೀನು ಹುಡುಕುತ್ತಿರುವ ದೇವರಾದ ಪರಮಾತ್ಮ, ಹುಡುಕುತ್ತಿರುವ ನೀನು ಇಬ್ಬರೂ ಶರೀರದಲ್ಲಿಯೇ ಇದ್ದೀರೆಂದು ಆದಿತ್ಯನು ಮೊದಲೇ ಹೇಳಿದ್ದಾನೆ. ಎಲ್ಲಿಯಾದರೂ ಒಬ್ಬರಿರುವಾಗ ಆತನನ್ನು ಏಕವಚನವಾಗಿ ಅವನು, ಇವನು ಎಂದು ಹೇಳುತ್ತೇವೆ. ಅವರು, ಇವರು ಎಂದು ಅನ್ನುವುದಿಲ್ಲ. ಅವರು, ಇವರು ಎಂದು ಕರೆದರೆ ಬಹುವಚನವಾಗುತ್ತದೆ. ನಮ್ಮ ಶರೀರದಲ್ಲಿ ಜೀವಿಯು ಏಕವಚನವಾಗಿ ಎಂದರೆ ಒಬ್ಬನಾಗಿಯೇ ಇದ್ದೇನೆಂದು ಅಜ್ಞಾನದಿಂದ ಅಂದುಕೊಳ್ಳುವುದು ನಡೆಯುತ್ತಿದೆ. ವಾಸ್ತವವಾಗಿ ಜೀವಿಯು ಒಬ್ಬನು ಶರೀರದಲ್ಲಿ ಏಕವಾಗಿ ಇಲ್ಲ. ಜೀವಿಯೊಂದಿಗೆ ಆತ್ಮ, ಪರಮಾತ್ಮ ಇಬ್ಬರಿದ್ದಾರೆ. ಒಟ್ಟಾರೆ ಶರೀರದಲ್ಲಿ ಮೂವರು ಬಹುವಚನವಾಗಿ ಹೇಳಲ್ಪಡುತ್ತಿದ್ದಾರೆ. ಎಲ್ಲಿಯಾದರೂ ಬಹುವಚನವಾಗಿ ಪದದ ಕೊನೆಯಲ್ಲಿ ತೆಲುಗಿನಲ್ಲಿ “ಲು” ಎಂದು ಕನ್ನಡದಲ್ಲಿ “ರು” ಮತ್ತು “ಳು” ಎನ್ನುವ ಅಕ್ಷರವನ್ನು ಇಡುತ್ತೇವೆ. ಗುಡುಗು ಎನ್ನುವುದು ಏಕವಚನವಾಗುತ್ತದೆ. ಗುಡುಗುಗಳು ಎನ್ನುವುದು ಬಹುವಚನವಾಗಿ ಬದಲಾಗಿಹೋಗುತ್ತದೆ. ಬಟ್ಟೆ ಏಕವಚನವಾಗಿದ್ದು ಬಟ್ಟೆಗಳು ಬಹುವಚನ ಆಗುತ್ತಿವೆ. ಹಾಗೆಯೇ ‘ಕರ್ಮ’ ಎನ್ನುವುದು ಏಕವಚನವಾಗಿದ್ದು ‘ಕರ್ಮಗಳು’ ಬಹುವಚನವಾಗುವುದು. ಒಂದು ‘ಲು’ (ಳು) (ರು) ಸೇರುವುದರಿಂದ ಬಹುವಚನವಾಗಿ ಬದಲಾಗಿಹೋಗುತ್ತಿದೆ.

| ಏಕವಚನ | ಬಹುವಚನ | ಏಕವಚನ | ಬಹುವಚನ |
|---|---|---|---|
| ಆತ್ಮ | ಆತ್ಮಗಳು | ರೋಗ | ರೋಗಗಳು |
| ಯೋಗ | ಯೋಗಗಳು | ಪಶು | ಪಶುಗಳು |
| ಶತ್ರು | ಶತ್ರುಗಳು | ಪುಸ್ತಕ | ಪುಸ್ತಕಗಳು |
| ವಸ್ತು | ವಸ್ತುಗಳು | ಗೃಹ | ಗೃಹಗಳು |
| ಕುರ್ಚಿ | ಕುರ್ಚಿಗಳು | ಮುಸ್ಲಿಮ್ | ಮುಸ್ಲಿಮ್‌ರು |

| | | | |
|---|---|---|---|
| ಬಾಲ | ಬಾಲಗಳು | ಹಿಂದೂ | ಹಿಂದೂಗಳು |
| ಹಾವು | ಹಾವುಗಳು | ಶರೀರ | ಶರೀರಗಳು |
| ಕಾಯಿ | ಕಾಯಿಗಳು | ಕಾಗದ | ಕಾಗದಗಳು |
| ತಲೆ | ತಲೆಗಳು | ಕಟ್ಟಿಗೆ | ಕಟ್ಟಿಗೆಗಳು |
| ಪಾಪ | ಪಾಪಗಳು | ಪೆಟ್ಟಿಗೆ | ಪೆಟ್ಟಿಗೆಗಳು |
| ಬಳ್ಳಿ | ಬಳ್ಳಿಗಳು | ಪುಣ್ಯ | ಪುಣ್ಯಗಳು |

ಈ ವಿಧವಾಗಿ ಹೇಳುತ್ತಾ ಹೋದರೆ ಒಂದು **'ಲು'** **(ಳು)** ಎನ್ನುವ ಅಕ್ಷರದಿಂದ ಏಕ ವಚನ ಬಹುವಚನವಾಗಿ ಬದಲಾಗಿಹೋಗುತ್ತಿದೆ.

**ಪ್ರಶ್ನೆ :– ಇಲ್ಲಿಯವರೆಗು ಸಿಹಿಯಾದ ಜ್ಞಾನವನ್ನು ಹೇಳಿ, ಇನ್ನೂ ಎಷ್ಟೋ ಜ್ಞಾನವನ್ನು ಕೇಳುತ್ತೇವೆಂದು ನಮ್ಮನ್ನು ಬಾಯೂರಿಸಿ ಒಂದುಸಲ ಗೊಡ್ಡುಕಾರ ಇಟ್ಟಂತೆ, ಒಂದೇಸಲ ಎಷ್ಟೋ ದೊಡ್ಡ ಜ್ಞಾನವನ್ನು ಬಿಟ್ಟು, ಕೆಳಗೆ ಬಂದು ಶಾಲೆಯಲ್ಲಿ ಹೇಳಿದಂತೆ ಏಕವಚನ, ಬಹುವಚನಗಳು ಹೇಳುತ್ತಿದ್ದೀರ. ಈಗ ನೀವು ಹೇಳಿರುವ ಪದಗಳಿಗಿಂತ ಏಕವಚನಗಳು, ಬಹುವಚನಗಳು ನಮಗೆ ಇನ್ನೂ ಹೆಚ್ಚಾಗಿ ತಿಳಿದಿವೆ. ಪ್ರಪಂಚ ಓದಿನಿಂದ ನಮಗೆ ಸಂತೋಷ ಉಂಟಾಗುವುದಿಲ್ಲ. ನಮಗೆ ಬೇಕಾಗಿರುವುದು ಆತ್ಮಜ್ಞಾನ. ಆತ್ಮಜ್ಞಾನವಾದ ಆಧ್ಯಾತ್ಮಿಕ ವಿದ್ಯೆಯನ್ನೇ ಹೇಳಿರಿ. ಪ್ರಪಂಚ ವಿದ್ಯೆಗಳಲ್ಲಿ ಬೇಸರವಾಗಿದೆ. ನಮಗೆ ಬೇಕಾಗಿರುವ ಪರಮಾತ್ಮ ವಿದ್ಯೆಯಾದ ಬ್ರಹ್ಮವಿದ್ಯೆಯನ್ನು ಕುರಿತು ಹೇಳಿರೆಂದು ಪ್ರಾರ್ಥಿಸುತ್ತಿದ್ದೇವೆ.**

**ಉತ್ತರ :–** ನಿನಗೆ ದೈವಜ್ಞಾನದ ಮೇಲೆ ಶ್ರದ್ಧೆ ಇದೆಯೋ ಇಲ್ಲವೋ ನೋಡೋಣವೆಂದು ಏಕವಚನ ಬಹುವಚನವೆಂದು ಹೇಳಿದ್ದೇನೆ. ನೀನು ದೈವಜ್ಞಾನವೇ ಬೇಕೆಂದು ಕೋರಿಕೊಳ್ಳುತ್ತಿದ್ದೀಯಾ, ಆದ್ದರಿಂದ ಬ್ರಹ್ಮವಿದ್ಯೆಯಾದ ದೈವಜ್ಞಾನವನ್ನೇ ಹೇಳುತ್ತೇನೆ ಕೇಳು. ನಿನ್ನ ಶರೀರದಲ್ಲಿ ನೀನು ಎನ್ನುವ ಜೀವಾತ್ಮವು ನಿವಾಸಿಸುತ್ತಿದ್ದೀಯಾ. ನಿನ್ನೊಂದಿಗೆ ಇನ್ನೂ ಇಬ್ಬರಿದ್ದಾರೆಂದು ಮೂರು ದೈವಗ್ರಂಥಗಳಲ್ಲಿ ಹೇಳಿದ್ದಾರೆ. ಅವರೇ ಆತ್ಮ, ಪರಮಾತ್ಮಯೆಂದು ಕರೆಯಲ್ಪಡುತ್ತಿದ್ದಾರೆ. ದೇವರು ಸೃಷ್ಟಿ ಆದಿಯಲ್ಲಿ ಒಂದು ಪ್ರಕೃತಿಯಾಗಿ, ಮೂರು

ಆತ್ಮಗಳಾಗಿ ವಿಭಾಗವಾಗಿದ್ದಾನೆಂದು ಹೇಳಿಕೊಂಡಿದ್ದೇವೆ. ಪ್ರಕೃತಿ ಶರೀರವಾಗಿ ತಯಾರಾದರೆ, ಮೂರು ಆತ್ಮಗಳು ಶರೀರದಲ್ಲಿ ಇವೆ. ಆದರೆ ಪ್ರತಿ ಮನುಷ್ಯ ಜ್ಞಾನ ತಿಳಿಯದವನಾಗಿ ಶರೀರದಲ್ಲಿ ತಾನು ಒಬ್ಬನೇ ಇರುವಂತೆ ಅಂದು ಕೊಳ್ಳುತ್ತಾನೆ. ತನ್ನನ್ನು ಒಬ್ಬನಾಗಿಯೇ ಶರೀರದಲ್ಲಿರುವಂತೆ ಅಂದುಕೊಳ್ಳುವುದರಿಂದ ತಾನು ಏಕವಚನದೊಳಗೆ ಬದಲಾಗಿಹೋಗುತ್ತಿದ್ದಾನೆ. ಶರೀರದಲ್ಲಿ ತಾನು ಬಹುವಚನವಾಗಿ ಇದ್ದೇನೆಂದು, ತನ್ನೊಂದಿಗೆ ಇನ್ನೂ ಇಬ್ಬರಿದ್ದಾರೆಂದು ತಿಳಿದರೆ ಆತನು ಜ್ಞಾನಿಯಾಗುತ್ತಾನೆ. ಹಾಗೆ ಜ್ಞಾನಿಯಾದರೆ ಅವನ ಕರ್ಮಗತಿಗಳು ಬದಲಾಗಿಹೋಗುತ್ತವೆ. ಇದೆಲ್ಲವೂ ಬ್ರಹ್ಮವಿದ್ಯೆಯಲ್ಲಿ ಇರುವ ವಿಧಾನವೇ. ಏಕವಚನವನ್ನು ಬಹುವಚನವಾಗಿ ಮಾರ್ಪಡಿಸುವ ಗತ್ತು **"ಲು"** **(ಳು)** ಎನ್ನುವ ಅಕ್ಷರಕ್ಕೆ ಇದೆಯೆಂದು ತಿಳಿಯುವಂತೆ ಮೇಲೆ ಕೆಲವು ಏಕವಚನ ಪದಗಳಿಗೆ ಒಂದು 'ಲು' (ಳು) (ರು) ನನ್ನು ಸೇರಿಸಿ ಬಹುವಚನವಾಗಿ ಬದಲಾಯಿಸಿದ್ದೇವೆ. ಏಕವಚನವನ್ನು ಬಹುವಚನವಾಗಿ ಬದಲಾಯಿಸುವ ಶಕ್ತಿ ಇರುವ 'ಲು' ಎನ್ನುವ ಅಕ್ಷರವನ್ನು ಸೂರ್ಯನು ಮಾತನಾಡಿದ ಭಾಷೆಯಲ್ಲಿ ಇರುವಂತೆ ಮಾಡಿ ಆ ದಿನವಿರುವ ಭಾಷೆಗೆ **"ತೆಲುಗು"** ಎಂದು ಹೆಸರು ಇಟ್ಟಿದ್ದಾನೆ. 'ತೆಲುಗು' ಎನ್ನುವ ಮೂರು ಅಕ್ಷರಗಳಲ್ಲಿ ಎಷ್ಟೋ ಜ್ಞಾನ ಅರ್ಥವಿರುವಂತೆ ಸೂರ್ಯನು 'ತೆಲುಗು' ಎನ್ನುವ ಹೆಸರನ್ನು ಇಟ್ಟಿದ್ದಾನೆ.

**ಪ್ರಶ್ನೆ :– ಏಕವಚನವನ್ನು ಬಹುವಚನವಾಗಿ ಬದಲಾಯಿಸುವುದಕ್ಕೆ 'ಲು'(ಳು) ಗೆ ಶಕ್ತಿ ಇದೆಯೆಂದು ಹೇಳಿದ್ದೀರ ಅಲ್ಲವೆ! ಮೇಲೆ ನೀವು ಹೇಳಿದ ಬಹುವಚನ ಪದಗಳಲ್ಲಿ 'ಲು' ಎನ್ನುವ ಅಕ್ಷರ ಪದದ ಕೊನೆಯಲ್ಲಿ ಇದೆ. ಪದದ ಕೊನೆಯಲ್ಲಿ ಇದ್ದರೆ ಏನಾದರೂ ಬಹುವಚನ ಆಗುತ್ತದೆ. ಆದರೆ 'ತೆಲುಗು' ಎನ್ನುವ ಹೆಸರಿನಲ್ಲಿ ಏನು ದೊಡ್ಡಸ್ತಿಕೆ ಇದೆಯೋ ನಮಗೆ ಅರ್ಥವಾಗಲಿಲ್ಲ. 'ಲು' ಬಹುವಚನವಾಗಿ ಯಾರನ್ನು ಮಾರ್ಪಡಿಸಿದೆಯೋ? ಮಧ್ಯದಲ್ಲಿ ಇದ್ದರೆ ಬಹುವಚನ ಹೇಗೆ ಆಗುತ್ತದೆ? ಈ 'ತೆಲುಗು' ಎನ್ನುವ ಪದದಲ್ಲಿ ಏನು ಜ್ಞಾನ ಅರ್ಥವಿದೆಯೋ ನಮಗೆ ಅರ್ಥವಾಗುವಂತೆ ದಯೆಮಾಡಿ ತಿಳಿಸುತ್ತೀರೆಂದು ಕೋರುತ್ತಿದ್ದೇನೆ.**

**ಉತ್ತರ :–** ಪ್ರಪಂಚ ವಿಷಯಗಳಲ್ಲಿನ ಪದಗಳಿಗು ದೈವ ವಿಷಯಗಳಲ್ಲಿನ ಪದಗಳಿಗು ಅರ್ಥ ಬೇರೆಬೇರೆಯಾಗಿ ಇರುತ್ತದೆ. ದೈವಿಕವಾಗಿ ಅರ್ಥವನ್ನು ತಿಳಿಯುವುದಕ್ಕೆ ಪ್ರಯತ್ನಿಸಿದರೆ ಪೂರ್ವದಲ್ಲಿ ಸೂರ್ಯನು ತಾನು ತಿಳಿಸಿದ ಬೋಧನೆಯಲ್ಲಿ ದೇವರು ಮೂರು ವಿಧಗಳ, ಮೂರು ಆತ್ಮಗಳಾಗಿ ವಿಭಜಿಸಿದ್ದಾನೆಂದು ತಿಳಿಯುವಂತೆ, ಮೊದಲು ತಾನು (ಸೂರ್ಯನು) ಮಾತನಾಡಿದ ಭಾಷೆಗೆ **"ತೆಲುಗು"** ಎಂದು ಹೆಸರು ಇಟ್ಟಿದ್ದಾನೆ. 'ತೆಲುಗು' ನಲ್ಲಿ ಮೂರು ಅಕ್ಷರಗಳು ಇವೆ. ಹಾಗೆಯೇ ದೇವರ ಭಾಗದಲ್ಲಿ ಮೂರು ಆತ್ಮಗಳು ಇವೆ. ಒಂದು ಪರಮಾತ್ಮವಾಗಿದ್ದು, ಎರಡನೆಯದು ಆತ್ಮವಾಗಿದ್ದು, ಮೂರನೆಯದು ಜೀವಾತ್ಮವಾಗಿದೆ. ಜ್ಞಾನ ತಿಳಿಯದ ಮನುಷ್ಯರಿಗೆ ಜೀವಾತ್ಮ ಒಂದೇ ತಿಳಿಯುತ್ತದೆ. ಪರಮಾತ್ಮ, ಆತ್ಮ ಶರೀರದಲ್ಲಿಯೇ ಇದ್ದಾರೆನ್ನುವ ವಿಷಯ ಅಜ್ಞಾನಿಗಳಿಗೆ ತಿಳಿದಿಲ್ಲ. ಸೂರ್ಯನು ಹೇಳಿದ ಮಾತಿನ ಪ್ರಕಾರ ಮನುಷ್ಯನ ಶರೀರದಲ್ಲಿ ಮೂರು ಆತ್ಮಗಳು ಇವೆಯೆಂದು ಜ್ಞಾನಕ್ಕೆ ಗುರುತಾಗಿ, ಮೂರು ಅಕ್ಷರಗಳ ಹೆಸರನ್ನು, ತಾನು ಹೇಳಿದ ಭಾಷೆಗೆ 'ತೆಲುಗು' ಎನ್ನುವ ಹೆಸರಿಡುವುದು ನಡೆದಿದೆ. ತೆಲುಗು ಪದದ ಕೊನೆಯಲ್ಲಿ 'ಗು' ಎನ್ನುವ ಅಕ್ಷರ **ಜೀವಾತ್ಮಗೆ** ಗುರುತಾಗಿ ಇದೆ. ತೆಲುಗು ಎನ್ನುವ ಹೆಸರಿನಲ್ಲಿ ಮೊದಲ ಅಕ್ಷರ **'ತೆ'** ಎನ್ನುವುದು **ಪರಮಾತ್ಮಗೆ** ಗುರುತಾಗಿ ಇದೆ. ತೆಲುಗು ಪದದಲ್ಲಿ ಮಧ್ಯ ಅಕ್ಷರ 'ಲು' ಎನ್ನುವುದು ಇದೆ. ಆದರೆ 'ಲು' ಎನ್ನುವ ಅಕ್ಷರ ಶರೀರದಲ್ಲಿನ **ಮಧ್ಯಾತ್ಮಗೆ** ಗುರುತಾಗಿ ಇಡಲಾಗಿದೆ. ಜೀವಿಯು ಒಂದುಕಡೆ ದೇವರು ಮತ್ತೊಂದುಕಡೆ ಇರುವಾಗ ಅವರಿಬ್ಬರನ್ನು ಸೇರಿಸಿ ಲು ಎನ್ನುವ ಅಕ್ಷರ ಬಹುವಚನ ಮಾಡುತ್ತಿದೆ.

ತೆಲುಗು ಪದದಲ್ಲಿ ದೇವರು ಎನ್ನುವ ಏಕವಚನವನ್ನು, ಜೀವಿಯೆನ್ನುವ ಏಕವಚನವನ್ನು ಕೂಡಿಸುತ್ತಾ ಆತ್ಮ ಇಬ್ಬರೊಂದಿಗೆ ಸಂಬಂಧಹೊಂದಿದ್ದು, ಎರಡು ಆತ್ಮಗಳನ್ನು ಸೇರಿಸಿ ಬಹುವಚನ ಮಾಡುತ್ತಿದೆ. ಪರಮಾತ್ಮಗೆ ಗುರುತಾಗಿರುವ 'ತೆ' ನ್ನು, ಜೀವಾತ್ಮಗೆ ಗುರುತಾಗಿರುವ 'ಗು' ನನ್ನು ಸೇರಿಸುವ ಆತ್ಮಕ್ಕೆ ಗುರುತಾಗಿರುವ "ಲು" ಎನ್ನುವ ಅಕ್ಷರವನ್ನು ತೆಗೆದುಕೊಂಡು 'ತೆಲುಗು'

ಪದವಾಗಿ ಹೇಳಿದ್ದಾರೆ. **ಪರಮಾತ್ಮಗೆ ಗುರುತು "ತೆ" ಎಂದೂ, ಆತ್ಮಗೆ ಗುರುತು "ಲು" ಎಂದೂ, ಜೀವಾತ್ಮಗೆ ಗುರುತು "ಗು"** ಎನ್ನುವ ಅಕ್ಷರವನ್ನು ಹೇಳುತ್ತಾ ಮೂರನ್ನು ಸೇರಿಸಿ **"ತೆಲುಗು"** ಎಂದು ಹೇಳುವುದರಲ್ಲಿ ಜ್ಞಾನ ಒಳಗೊಂಡಿರುವಂತೆ ಸೂರ್ಯನು ಚೆನ್ನಾಗಿ ಆ ಹೆಸರನ್ನು ಆರಿಸಿಕೊಂಡಿದ್ದಾನೆ. ಶರೀರದಲ್ಲಿ ಇತ್ತಾ ಪರಮಾತ್ಮನೊಂದಿಗೂ, ಅತ್ತಾ ಜೀವಾತ್ಮನೊಂದಿಗೂ ಆತ್ಮ ಸಂಬಂಧ ಹೊಂದಿದೆ. ಎರಡು ಆತ್ಮಗಳೊಂದಿಗೆ ಅನುಸಂಧಾನವಾಗಿರುವ ಆತ್ಮ, ಏಕವಾಗಿರುವ ಜೀವಿಯನ್ನು, ಏಕವಾಗಿರುವ ದೇವರನ್ನು ಕೂಡಿಸಿ ಮೂರು ಆತ್ಮಗಳಾಗಿ ಬಹುವಚನದಿಂದ ಹೇಳುವಂತೆ ಮಾಡುತ್ತಿದೆ.

ಶರೀರದಲ್ಲಿ ಕೆಲಸ ಮಾಡಲಾಗದ ಜೀವಾತ್ಮನೊಂದಿಗೆ ಬೆರೆತು ಜತೆಯಾಗಿದ್ದು ಜೀವಿಯ ಕೆಲಸವೆಲ್ಲವನ್ನು ಆತ್ಮವೇ ಮಾಡುತ್ತಿದೆ. ಹಾಗೆ ಮಾಡುವುದನ್ನು ಆತ್ಮ ಬಹಳ ಗೌಪ್ಯವಾಗಿ ಇಡುತ್ತಾ ತಾನು ಏನು ಮಾಡದಂತಿರುವುದರಿಂದ ನಡೆಯುವ ಕೆಲಸವನ್ನು ಜೀವಾತ್ಮವೇ ಮಾಡಿದೆಯೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಶರೀರದಲ್ಲಿ ಆತ್ಮ ಜೀವಿಯ ಕೆಲಸವನ್ನು ಮಾಡಿದರೂ, ಅದು ಜೀವಿಗು ಕೂಡಾ ತಿಳಿಯದಿರುವುದರಿಂದ ಜೀವಿಯು ಕೂಡಾ ನಡೆದ ಕೆಲಸವನ್ನು ತಾನೇ ಮಾಡಿದ್ದೇನೆಂದು ಅಂದುಕೊಳ್ಳುತ್ತಿದ್ದಾನೆ. ಆತ್ಮ ಶರೀರದಲ್ಲಿ ಅಡಗಿದ್ದು ಯಾರಿಗೂ ತಿಳಿಯದಿರುವುದರಿಂದ, ಆತ್ಮವನ್ನು ಯಾರೂ ಗುರುತಿಸದೇ ಹೋಗುವುದಲ್ಲದೆ, ಆತ್ಮ ಕೆಲಸವನ್ನು ಕೂಡಾ ಗುರುತಿಸಲಾಗದೆ ಹೋಗುತ್ತಿದ್ದಾರೆ. ಸೂರ್ಯನು ದೈವ ಜ್ಞಾನವನ್ನು ತಿಳಿಸಿದಾಗ, ಆತ್ಮವನ್ನು ಯಾರಿಗೂ ತಿಳಿಯದಂತೆ, ಶರೀರದಲ್ಲಿನ ಜೀವಾತ್ಮನಿಗು ಕೂಡಾ ತಿಳಿಯದಂತೆ, ಜೀವಿಗು ದೇವರಿಗು ಮಧ್ಯದಲ್ಲಿ ತಿಳಿಯದೇ ಇರುವಂತೆ ಮಾಡಿದ್ದಾನೆ. ಆತ್ಮ ಅತ್ತ ದೇವರೊಂದಿಗೂ ಇತ್ತ ಜೀವಿಯೊಂದಿಗೂ ಎರಡುಕಡೆ ಎರಡು ಆತ್ಮಗಳೊಂದಿಗೆ ಕೂಡಿದೆಯೆಂದು ತಿಳಿಯುವುದಕ್ಕೆ ಎರಡು ಕೊಂಬುಗಳಿರುವ "ಲು" ಎನ್ನುವ ಅಕ್ಷರವನ್ನು 'ತೆ' ಗು, 'ಗು' ಗು ಮಧ್ಯದಲ್ಲಿ ಸೂರ್ಯನು ಇಟ್ಟು 'ತೆಲುಗು' ಎಂದು ಹೇಳಿದ್ದಾನೆ. 'ಲು' ಗೆ ಎರಡು ಕೈಗಳಂತೆ

ಎರಡು ಕೊಂಬುಗಳು ಇರುವುದರಿಂದ, ಒಂದು ಕೈಯಿಂದ ಪರಮಾತ್ಮನನ್ನು, ಒಂದು ಕೈಯಿಂದ ಜೀವಾತ್ಮನನ್ನು ಹಿಡಿದುಕೊಂಡಿರುವ ಮೂರಕ್ಷರಗಳ 'ತೆಲುಗು' ಪದವನ್ನು ಕೆಳಗಿರುವ ಚಿತ್ರದಲ್ಲಿ ನೋಡಬಹುದು.

ಈಗ 'ಲು' ಎಂದರೆ ಏನು? ಎನ್ನುವ ಪ್ರಶ್ನೆಗೆ **'ಲು' ಎಂದರೆ "ಆತ್ಮ"** ಎಂದು ತಿಳಿದಿದೆ. ಇಲ್ಲಿ 'ತೆಲುಗು' ಎನ್ನುವ ಮೂರಕ್ಷರಗಳ ಹೆಸರನ್ನು ಮೊದಲ ಭಾಷೆಗೆ ನಾಮಕರಣ ಸೂರ್ಯನು ಮಾಡಿದ್ದಾನೆ. ಮೂರು ಆತ್ಮಗಳಿಗು ಗುರುತಾಗಿ 'ತೆಲುಗು' ಎನ್ನುವ ಮೂರು ಅಕ್ಷರಗಳನ್ನು ಗುರುತಿಸಿ ಹೇಳುವುದಾಗಿದೆ. ಮೇಲಿರುವ ಚಿತ್ರಪಟದಲ್ಲಿ ನೋಡಿದ ನಂತರ 'ತೆ' ಎನ್ನುವ ಪರಮಾತ್ಮನೊಂದಿಗೆ 'ಲು' ಎನ್ನುವ ಆತ್ಮ ಸ್ವಲ್ಪ ಬೆರೆತಿರುವಂತೆ ತಿಳಿಯುವುದಲ್ಲದೆ, ಪಕ್ಕದಲ್ಲಿಯೇ ಇರುವ ಜೀವಾತ್ಮದೊಂದಿಗೆ ಅಂಟಿಅಂಟದೆ ಪಕ್ಕದಲ್ಲಿಯೇ ಇರುವಂತೆ ತಿಳಿಯುತ್ತಿದೆ. ಪರಮಾತ್ಮನಲ್ಲಿ ಸ್ವಲ್ಪ ತಗುಲಿಕೊಂಡಿರುವ ಆತ್ಮ ಜೀವಾತ್ಮದೊಂದಿಗೆ ಪೂರ್ತಿ ಅಂಟಿಕೊಳ್ಳದೆ ಜೀವಾತ್ಮ ಪಕ್ಕದಲ್ಲಿಯೇ ಇದೆಯೆಂದು ತಿಳಿದಿದೆ. ಪರಮಾತ್ಮಗು, ಜೀವಾತ್ಮಗು ಮಧ್ಯದಲ್ಲಿ ಆತ್ಮ ಇರುವುದರಿಂದ ಆತ್ಮವನ್ನು ಮಧ್ಯಾತ್ಮಯೆಂದು ಕೂಡಾ ಹೇಳಬಹುದು. ಪರಮಾತ್ಮಗು, ಜೀವಾತ್ಮಗು ಅಂಟಿಕೊಂಡು ಅಂಟಿಕೊಳ್ಳದೆ ಹತ್ತಿರವಾಗಿ ಇರುವುದರಿಂದ, ಮಧ್ಯಾತ್ಮವನ್ನು



ಅನುಸಂಧಾನ ಆತ್ಮಯೆಂದು ಹೇಳಬಹುದು. ಆತ್ಮವನ್ನು ಮೂರು ದೈವಗ್ರಂಥಗಳಲ್ಲಿ ಹೇಳಿದ್ದರೂ, ಆತ್ಮಯೆನ್ನುವ ಹೆಸರಿನಿಂದ ಯಾರೂ ಹೇಳದಂತೆ ಆತ್ಮ ಮಾಯೆ ಮಾಡಿದೆ. ಆತ್ಮವೊಂದರ ಅಸಲು ಸಿಸಲಾದ ಹೆಸರು 'ಆತ್ಮ' ಆದರೂ 'ಮಧ್ಯ ದೈವಗ್ರಂಥದಲ್ಲಿ ತಂದೆಯೆಂದು' ಹೇಳಲ್ಪಟ್ಟಿದೆ. 'ಕೊನೆಯ ದೈವಗ್ರಂಥದಲ್ಲಿ ನಡೆಸುವವನೆಂದು, ದೂತಯೆಂದು' ಹೇಳಲ್ಪಟ್ಟಿದೆ. 'ಪ್ರಥಮ ದೈವಗ್ರಂಥದಲ್ಲಿ ಆತ್ಮವನ್ನು ಆತ್ಮಯೆಂದೇ' ಹೇಳಿದ್ದಾರೆ, ಆದರೂ ಯಾರೂ ಆತ್ಮವನ್ನು ಆತ್ಮವಾಗಿ ಅಲ್ಲದೆ ಅತ್ತ ಪತಮಾತ್ಮನಾಗಿಯೋ, ಇತ್ತ ಜೀವಾತ್ಮನಾಗಿಯೋ ಲೆಕ್ಕಿಸಿದ್ದಾರೆ ಹೊರತು ಮಧ್ಯ ಆತ್ಮವಾಗಿ ಯಾರೂ ಗುರುತಿಸಲಿಲ್ಲ.

ಭಗವದ್ಗೀತೆಯಲ್ಲಿ ಆತ್ಮವನ್ನು ಕುರಿತು ಅನೇಕಸಲ ಹೇಳುವುದು ನಡೆದಿದೆ. ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಆತ್ಮವೊಂದರ ಸಮಾಚಾರವನ್ನು ಅಂದರೆ ಆತ್ಮವನ್ನು ಕುರಿತು, ಆತ್ಮಯೆನ್ನುವ ಪದವನ್ನು ಉಪಯೋಗಿಸಿ ಹೇಳಿರುವುದು ಒಟ್ಟು ಹದಿನಾರು ಬಾರಿ ಇದೆ. ಸಾಂಖ್ಯಯೋಗದಲ್ಲಿ 55ನೇ, ಮತ್ತು 64ನೇ ಶ್ಲೋಕಗಳಲ್ಲಿಯೂ, ಕರ್ಮಯೋಗದಲ್ಲಿ 17ನೇ ಶ್ಲೋಕದಲ್ಲಿಯೂ, ಜ್ಞಾನಯೋಗದಲ್ಲಿ 27ನೇ ಮತ್ತು 41ನೇ ಶ್ಲೋಕಗಳಲ್ಲಿಯೂ, ಆತ್ಮಸಂಯಮ ಯೋಗದಲ್ಲಿ 5, 10, 18, 25, 26, 32ನೇ ಶ್ಲೋಕಗಳಲ್ಲಿಯೂ, ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ, 34ನೇ ಶ್ಲೋಕದಲ್ಲಿ, ವಿಶ್ವರೂಪ ಸಂದರ್ಶನ ಯೋಗದಲ್ಲಿ 3ನೇ ಶ್ಲೋಕದಲ್ಲಿ, ದೈವಾಸುರ ಸಂಪದ್ವಿಭಾಗ ಯೋಗದಲ್ಲಿ 17ನೇ ಶ್ಲೋಕದಲ್ಲಿಯೂ, ಮೋಕ್ಷ ಸಂನ್ಯಾಸ ಯೋಗದಲ್ಲಿ 16, 37ನೇ ಶ್ಲೋಕಗಳಲ್ಲಿಯೂ ಆತ್ಮಯೆನ್ನುವ ಹೆಸರನ್ನು ಹೇಳುವುದಾಗಿದೆ. ಒಟ್ಟು ಹದಿನಾರುಸಲ ಆತ್ಮಯೆನ್ನುವ ಪದ ಬಂದರೂ, (ಹೇಳಿದರೂ) ಅಲ್ಲಿ ಆತ್ಮವನ್ನು ಆತ್ಮವಾಗಿ ಯಾರೂ ಗುರುತಿಸಲಿಲ್ಲ. ಆತ್ಮವನ್ನು ಜೀವಾತ್ಮ ಎಂದೋ, ಆತ್ಮವನ್ನು ಪರಮಾತ್ಮ ಎಂದೋ ಗುರುತಿಸಿದ್ದಾರೆ. ಅದೇ ಬರೆದುಕೊಂಡಿದ್ದಾರೆ. ಬಹಳ ಸಂದರ್ಭಗಳಲ್ಲಿ ಆತ್ಮವನ್ನು ಮನಸ್ಸಾಗಿ ಕೂಡಾ ಹೇಳಿಕೊಂಡಿದ್ದಾರೆ. ಮೂರು ದೈವ ಗ್ರಂಥಗಳಲ್ಲಿ ಆತ್ಮವೊಂದರ ಪ್ರಸ್ಥಾವನೆ ಬಂದರೂ, ಅಲ್ಲಿ ಆತ್ಮವನ್ನು

ಬೇರೆಯಾಗಿ ತಿಳಿದುಕೊಳ್ಳುವುದು ನಡೆದಿದೆ, ಹಾಗೇ ನಡೆಯುತ್ತಿದೆ. ಆದ್ದರಿಂದ ದೇವರು ಆತ್ಮವನ್ನು ಕುರಿತು ತಿಳಿಸಿದರೂ, ಮನುಷ್ಯ ತಿಳಿದುಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಆದ್ದರಿಂದ ಭೂಮಿಮೇಲೆ ಇಲ್ಲಿಯವರೆಗು ಆತ್ಮಯೆನ್ನುವುದು ಪ್ರತ್ಯೇಕವಾಗಿ ಒಂದಿದೆಯೆಂದು ಯಾರಿಗೂ ತಿಳಿಯದಂತೆ ಹೋಗಿದೆ.

ಆತ್ಮ ಶರೀರದಲ್ಲಿ ರಾಜನಾಗಿ ಇದೆ. ಆತ್ಮ ಶರೀರದಲ್ಲಿ ಚೈತನ್ಯಶಕ್ತಿಯಾಗಿದ್ದು ಯಾರಿಗೂ ತಿಳಿಯದೇ ಇದೆಯೆಂದು ಹೇಳಬಹುದು. ಆತ್ಮ ಶರೀರದಲ್ಲಿ ಹೊರಗೆ ಯಾರಿಗೂ ತಿಳಿಯದೆ ಅಡಗಿದೆ. ಜೀವ ಶರೀರಗಳು ಎಲ್ಲಿವೆಯೋ ಅಲ್ಲೆಲ್ಲಾ ಆತ್ಮ, ಪರಮಾತ್ಮ ಎರಡೂ ಇವೆ. 'ತೆಲುಗು' ಎನ್ನುವ ಪದದಲ್ಲಿ 'ತೆ' ಗೆ ಅಂಟಿಕೊಂಡು 'ಗು' ಗೆ ಅಂಟಿಕೊಂಡು 'ಲು' ಇರುವಂತೆ, ಆತ್ಮ ಪರಮಾತ್ಮದೊಂದಿಗೆ ಪೂರ್ತಿ ಸಂಬಂಧಹೊಂದಿದೆಯೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ **ಆತ್ಮ ಜೀವಾತ್ಮಗೆ ಹತ್ತಿರವಾಗಿದ್ದು ಜೀವಿಯ ಭಾವನೆಯನ್ನು ಪ್ರತಿಕ್ಷಣ ತಿಳಿಯುತ್ತಿದೆ.** 'ತೆಲುಗು' ಎನ್ನುವ ಮೂರಕ್ಷರಗಳ ಚಿತ್ರಪಟದಲ್ಲಿ ಮಧ್ಯದಲ್ಲಿರುವ 'ಲು' ಎನ್ನುವ ಆತ್ಮ, ಪರಮಾತ್ಮಯೆನ್ನುವ 'ತೆ' ಎನ್ನುವ ಅಕ್ಷರದೊಂದಿಗೆ ಅಂಟಿಕೊಂಡಿರುವಂತೆ ತೋರಿಸಿದ್ದೇವೆ. ಹಾಗೆ ತೋರಿಸುವುದರಿಂದ ಮಧ್ಯದಲ್ಲಿರುವ ಆತ್ಮ ಪರಮಾತ್ಮದೊಂದಿಗೆ ಬೆರೆತಿದೆಯೆಂದು ತಿಳಿಯಬಲ್ಲದು. ಒಂದುಕಡೆ 'ತೆ' ಎನ್ನುವ ಅಕ್ಷರದಿಂದ ಕೂಡಿರುವ 'ಲು' ಮತ್ತೊಂದುಕಡೆ 'ಗು' ಎನ್ನುವ ಜೀವಾತ್ಮಗೆ ಹತ್ತಿರವಾಗಿರುವಂತೆ 'ಗು' ಗೆ ಪಕ್ಕದಲ್ಲಿರುವಂತೆ ತಿಳಿಯುತ್ತಿದೆ. ಅದರಿಂದ ಪರಮಾತ್ಮದೊಂದಿಗೆ ಆತ್ಮ ಅಂಟಿಕೊಂಡು, ಜೀವಾತ್ಮದೊಂದಿಗೆ ಜೊತೆಯಾಗಿ ಇದೆಯೆಂದು ತಿಳಿಯುತ್ತಿದೆ. ಅಂಟಿಕೊಂಡು, ಜೊತೆಯಾಗಿ ಆತ್ಮ ಇದೆಯೆಂದು ತಿಳಿಯುವಂತೆ, ಯಾರೊಂದಿಗೆ ಅಂಟಿಕೊಂಡಿದೆಯೊ, ಯಾರೊಂದಿಗೆ ಜೊತೆಯಾಗಿದೆಯೋ ತಿಳಿಯುವಂತೆ 'ತೆಲುಗು' ಎನ್ನುವ ಮೂರಕ್ಷರಗಳ ಚಿತ್ರಪಟವನ್ನು ನಿಮಗೆ ತೋರಿಸುವುದು ನಡೆದಿದೆ.

ಸೃಷ್ಟಿ ತಯಾರಾದ ನಂತರ ಮೊದಲು ತಯಾರಾದ ಭಾಷೆ ತೆಲುಗು ಭಾಷೆ. ಆದರೂ ಆದಿನ ಭಾಷೆಗೆ ಹೆಸರಿಲ್ಲದಂತೆ ಇರುತ್ತಿತ್ತು. ಭಾಷೆ ತಯಾರಾದ ಸ್ವಲ್ಪಕಾಲಕ್ಕೆ ಆಕಾಶ ಗ್ರಹವಾದ ಸೂರ್ಯನು ಭೂಮಿಮೇಲಕ್ಕೆ ಬಂದು, ಮನುವು ಎನ್ನುವ ಮನುಷ್ಯನಿಗೆ ತಿಳಿದ ಭಾಷೆಯಲ್ಲಿಯೇ ಮಾತನಾಡಿ ಜ್ಞಾನ ಹೇಳುವುದಾಗಿದೆ. ಆದಿತ್ಯನಾದ ಸೂರ್ಯನು ಆದಿಯಲ್ಲಿ ಮೊದಲನೆಯದಾಗಿ ಮಾತನಾಡಿದ ಭಾಷೆಗೆ ಸೂರ್ಯನೇ ಹೆಸರಿಟ್ಟುಹೋಗಿದ್ದಾನೆ. ಭೂಮಿಮೇಲೆ ಜ್ಞಾನ ತಿಳಿಸಿದ ಮೊದಲ ಭಾಷೆಯಾಗಿ ಭವಿಷ್ಯತ್ತಿನಲ್ಲಿ ಎಲ್ಲರಿಗೂ ತಿಳಿಯುವಹಾಗೆ ಇರುವಂತೆ ಮತ್ತು ತಿಳಿಸಿದ ಜ್ಞಾನದಲ್ಲಿ ಮೂರು ಆತ್ಮಗಳ ವಿಷಯವೇ ಮುಖ್ಯವಾಗಿ ಇದೆಯೆಂದು ತಿಳಿಯುವಂತೆ, 'ತೆಲುಗು' ಎನ್ನುವ ಮೂರಕ್ಷರಗಳ ಹೆಸರನ್ನು ಆದಿತ್ಯನು ಇಡುವುದು ನಡೆದಿದೆ. ಅಷ್ಟೇಅಲ್ಲದೆ ಅಲ್ಲಿಯವರೆಗು ತೆಲುಗು ಭಾಷೆಗೆ ಇಲ್ಲದ ಲಿಪಿಯನ್ನು ಸೂರ್ಯನೇ ಸೂಚಿಸಿ ಹೋಗಿದ್ದಾನೆ. ಸೂರ್ಯನು ಸೂಚನಾ ಪ್ರಾಯವಾಗಿ ಮೊದಲು ತಿಳಿಸಿರುವುದು ಓಂ ಎನ್ನುವ ಅಕ್ಷರವನ್ನು. ಸೂರ್ಯನು ಮೊದಲು ತಿಳಿಸಿದ 'ಓಂ' ಎನ್ನುವ ಲಿಪಿಯಿಂದ ತೆಲುಗು ಲಿಪಿಯೆಲ್ಲವೂ ಬರೆಯಲ್ಪಟ್ಟಿದೆ. ಮೊದಲು ಬರೆದ ಅಕ್ಷರವನ್ನು ಆ ದಿನದಿಂದ ಈ ದಿನದವರೆಗು ಮೊದಲ ಅಕ್ಷರವಾಗಿ ಹೇಳಿಕೊಳ್ಳುತ್ತಿದ್ದೇವೆ. ಅದನ್ನೇ **'ಪ್ರಣವಾಕ್ಷರ'** ಎಂದು ಅನ್ನುತ್ತಿದ್ದೇವೆ. ಪ್ರಣವಾಕ್ಷರ ಎಂದರೆ "ಮೊದಲು ಹುಟ್ಟಿದ ಮುಖ್ಯವಾದ ಅಕ್ಷರ" ಎಂದು ಹೇಳಬಹುದು.

**ಪ್ರಶ್ನೆ :– ನೀವು ಮೊದಲು ಹುಟ್ಟಿದ ಭಾಷೆಗೇ 'ತೆಲುಗು' ಎಂದು ಹೆಸರು ಇಟ್ಟಿದ್ದಾರೆಂದು ಅನ್ನುತ್ತಿದ್ದೀರ. ಈಗ ಪ್ರಪಂಚದಲ್ಲಿರುವ 7105 ಭಾಷೆಗಳಲ್ಲಿ ತೆಲುಗು ಭಾಷೆಯೇ ಮೊದಲು ಹುಟ್ಟಿದೆಯೆನ್ನುವುದಕ್ಕೆ ಆಧಾರವಾಗಲಿ, ಸಾಕ್ಷ್ಯವಾಗಲಿ ಏನಾದರೂ ಇದೆಯಾ? ನಿಮ್ಮ ಮಾತನ್ನು ನಾವು ನಂಬುತ್ತೇವೆ ಆದರೆ, ಇತರರು ನಂಬುವುದಿಲ್ಲ ಅಲ್ಲವೆ! ಅವರು ಪ್ರಶ್ನಿಸಿದರೆ ನಾವು ಏನು ಹೇಳಬೇಕು? ನೀವು ಹೇಳಿದ್ದೀರೆಂದರೆ ಅದು ನೂರಕ್ಕೆ ನೂರರಷ್ಟು ನಿಜವಾಗಿರುತ್ತದೆ. ಆದರೂ ನಮ್ಮ ಅಜ್ಞಾನದಿಂದ ನಾವು ಪ್ರಶ್ನಿಸುತ್ತಿದ್ದೇವೆ. ದಯೆಮಾಡಿ ತಿಳಿಸಬೇಕೆಂದು ಕೋರುತ್ತಿದ್ದೇವೆ.**

**ಉತ್ತರ :-** ಮೊದಲ ಭಾಷೆ ತೆಲುಗು ಎನ್ನುವುದಕ್ಕೆ 'ತೆಲುಗು' ಎನ್ನುವ ಮೂರಕ್ಷರಗಳೇ ಸಾಕ್ಷಿಯಾಗಿವೆ. 'ತೆಲುಗು' ಎನ್ನುವ ಮೂರು ಗುರುತುಗಳು ಮೂರು ಆತ್ಮಗಳಿಗೆ ಸಾಕ್ಷ್ಯವಾಗಿವೆ. ಸೂರ್ಯನು 'ತೆಲುಗು' ಎನ್ನುವ ಮೂರು ಶಬ್ದಗಳನ್ನು ಮೂರಕ್ಷರಗಳೆಂದು ಹೇಳಿದ್ದಾನೆ. ಅಲ್ಲಿಯವರೆಗು ಮಾತನಾಡುತ್ತಿರುವ ಭಾಷೆಗೆ ಹೆಸರಿಲ್ಲ. ಹಾಗೆ ಲಿಪಿಯೂ ಇಲ್ಲ. ಮೊದಲು ಸೂರ್ಯನು ಮಾತನಾಡಿದ ಭಾಷೆ ಸೂರ್ಯನಿಂದಲೇ ತೆಲುಗು ಎನ್ನುವ ಮೂರು ಪ್ರತ್ಯೇಕವಾದ ಶಬ್ದಗಳಿಂದ ಕೂಡಿದ ಹೆಸರಿಟ್ಟಿದ್ದಾನೆ. ಆಗಲೇ ತೆಲುಗು ಭಾಷೆಗೆ ಲಿಪಿಯನ್ನು ಸೂಚಿಸಿ ಓಂ ಎಂದು ಪ್ರಾರಂಭಿಸಿ ಹೋಗಿದ್ದಾನೆ. ಸೂರ್ಯನು ಮೊದಲು ಪ್ರಾರಂಭಿಸಿದ 'ಓಂ' ಶಬ್ದವನ್ನು ಲಿಪಿಯಾಗಿ ಹೇಳಿದವನು ಸೂರ್ಯನೇ, ಆದ್ದರಿಂದ ಆ ವಿಷಯವನ್ನು ಮರೆಯದಂತೆ ಎಲ್ಲಿಯಾದರೂ ಮೊದಲು 'ಓಂ' ಅನ್ನು ಬರೆಯುವುದು ಹಿಂದೂಗಳಿಗೆ ಪರಿಪಾಟವಾಗಿರುತ್ತಿತ್ತು. ಪ್ರತಿ ಮಾತಿನ ಮುಂದೆ, ಪ್ರತಿ ಮಂತ್ರದ ಮುಂದೆ 'ಓಂ' ಶಬ್ದವನ್ನು ಉಚ್ಚರಿಸುವುದು ಇರುತ್ತಿತ್ತು. ಈ ಮಧ್ಯಕಾಲದಲ್ಲಿ ಮಾತುಗಳ ಮುಂದೆ 'ಓಂ' ಶಬ್ದ ಹೋಗಿದೆ. ಕೇವಲ ಮಂತ್ರಗಳ ಮುಂದೆ ಮಾತ್ರವೇ 'ಓಂ' ಶಬ್ದವನ್ನು ಉಚ್ಚರಿಸುವುದಾಗಲಿ, ಬರೆಯುವುದಾಗಲಿ ನಡೆಯುತ್ತಿದೆ. ನಮ್ಮ ಮಾತು ನಿಜವೆಂದು ತಿಳಿಯುವುದಕ್ಕೆ 'ಓಂ' ಪ್ರಣವಾಕ್ಷರವಾಗಿ ಇಂದಿಗೂ ಉಳಿದಿದೆ. ಅಷ್ಟೇ ಅಲ್ಲದೆ ತೆಲುಗು ಶಬ್ದದಲ್ಲಿನ ಮೂರು ಗುರುತುಗಳಿಗೆ, ಎಂದರೆ ತೆಲುಗು ಶಬ್ದಕ್ಕೆ ಲಿಖಿಸಿದ ಲಿಪಿಯನ್ನು ಕೇವಲ ಲಿಪಿ ಎಂದು ಅನ್ನದಂತೆ ಲಿಪಿಗೆ ಪ್ರತ್ಯೇಕವಾದ ಹೆಸರಿಡುವುದು ನಡೆದಿದೆ. ಲಿಪಿ ಲಿಖಿಸಬಹುದು. ಲಿಖಿಸಿದ ಸಮಾಚಾರವನ್ನು 'ಲೇಖನ' ಎನ್ನುವುದು ನಡೆಯುತ್ತಿದೆ. ಆದರೆ ಭಾಷೆಗೆ 'ತೆಲುಗು' ಎನ್ನುವ ಹೆಸರಿಟ್ಟಿರುವ ಸೂರ್ಯನು ಲಿಪಿಗೆ 'ಅಕ್ಷರ' ಎಂದು ಕೂಡಾ ಹೆಸರಿಟ್ಟಿದ್ದಾನೆ.

ದೇವರು ಸೃಷ್ಠಿಯನ್ನು ತಯಾರು ಮಾಡದಮುನ್ನವೇ ಸೃಷ್ಠಿಗಾಗಿ ಮೊದಲು ತನ್ನನ್ನು ನಾಲ್ಕು ವಿಧಗಳಾಗಿ ವಿಭಜಿಸಿಕೊಂಡಿದ್ದಾನೆ. ಮೊದಲು ತನ್ನಿಂದ ಪ್ರಕೃತಿಯನ್ನು ಹೊರಗೆ ತೆಗೆದಿದ್ದಾನೆ. ನಂತರ ತನ್ನನ್ನು ಮೂರು ವಿಧಗಳಾಗಿ ವಿಭಜಿಸಿದ್ದಾನೆ. ಆ ವಿಧವಾಗಿ ವಿಭಜಿಸಲ್ಪಟ್ಟ ಮೂರನ್ನು ಒಂದನ್ನು

ಪರಮಾತ್ಮಯೆಂದು, ಎರಡನೆಯದನ್ನು ಆತ್ಮಯೆಂದು, ಮೂರನೆಯದನ್ನು ಜೀವಾತ್ಮಯೆಂದು ಹೇಳುವುದಾಗಿದೆ. ಮೂರು ಆತ್ಮಗಳನ್ನು ಒಂದುಕಡೆ, ಪ್ರಕೃತಿಯನ್ನು ಒಂದುಕಡೆ ಎರಡು ವಿಧಗಳಾಗಿ ಮಾಡಿದ್ದಾನೆ. ಪ್ರಕೃತಿ ಬದಲಾವಣೆಹೊಂದುವುದಾಗಿ, ನಾಶವಾಗುವುದಾಗಿ ಹೇಳಿದ್ದಾನೆ. ಮೂರು ಅತ್ಮಗಳನ್ನು ನಾಶ ಇಲ್ಲದಿರುವವೆಂದು ಹೇಳಿದ್ದಾನೆ. ಕ್ಷರ ಎಂದರೆ 'ನಾಶ' ಎಂದು ಅರ್ಥ. ಪ್ರಕೃತಿಯಿಂದ ತಯಾರಾದ ಶರೀರ ನಾಶವಾಗುವುದು ಆದ್ದರಿಂದ ಅದನ್ನು 'ಕ್ಷರ' ಎಂದು ಕರೆದಿದ್ದಾರೆ. ಆತ್ಮಗಳು ಪ್ರಕೃತಿಗಿಂತ ಭಿನ್ನವಾಗಿದ್ದು ನಾಶ ಇಲ್ಲದಿರುವವಾಗಿ ಇರುವುದರಿಂದ ಆತ್ಮಗಳನ್ನು 'ಅಕ್ಷರಗಳು' ಎಂದು ಹೇಳಿದ್ದಾನೆ. ಪರಮಾತ್ಮ, ಆತ್ಮ, ಜೀವಾತ್ಮ ಮೂರು ಆತ್ಮಗಳು ನಾಶ ಇಲ್ಲದಿರುವವಾದ್ದರಿಂದ ಅವುಗಳನ್ನು 'ಅಕ್ಷರಗಳು' ಎಂದು ಅನ್ನುವುದು ನಡೆಯುತ್ತಿದೆ. ಅಕ್ಷರಗಳು ಎಂದರೆ ನಾಶವಾಗದಿರುವವೆಂದು ಅರ್ಥ ಇರುವುದು ತಿಳಿದ ವಿಷಯವೇ ಅಲ್ಲವೆ! ಸೂರ್ಯನು ತೆಲುಗು ಎಂದು ಭಾಷೆಗೆ ಹೆಸರಿಟ್ಟು ಲಿಪಿಯನ್ನು ತೋರಿಸಿದಾಗ, ತೆಲುಗು ಎನ್ನುವ ಮೂರು ಶಬ್ದಗಳು ಮೂರು ಆತ್ಮಗಳಿಗೆ ಗುರುತಾಗಿವೆ ಆದ್ದರಿಂದ, ಆತ್ಮಗಳು ನಾಶ ಆಗುವುದಿಲ್ಲ ಎಂದು ತಿಳಿಯವಹಾಗೆ 'ತೆಲುಗು' ಎನ್ನುವ ಮೂರು ಶಬ್ದಗಳ ಲಿಪಿಯನ್ನು, ಮೂರು ಅಕ್ಷರಗಳು ಎಂದು ಹೇಳಿದ್ದಾನೆ. ಅಂದಿನಿಂದ ಲಿಪಿಗೆ 'ಅಕ್ಷರಗಳು' ಎನ್ನುವ ಹೆಸರು ಬಂದಿದೆ. ಆ ದಿನ ಜ್ಞಾನಸಂಬಂಧವಾಗಿ ಇಟ್ಟಿರುವ ಹೆಸರು ಇಂದಿಗೂ ಭಾಷೆಗೆ ತೆಲುಗುಯೆಂದು, ಲಿಪಿಗೆ ಅಕ್ಷರಗಳೆಂದು ಹೇಳುವುದು ನೋಡುತ್ತಲೇ ಇದ್ದೇವೆ. ನಾನು ಹೇಳಿದ ವಿಧವಾಗಿಯೇ ಭಾಷೆಗು ಮತ್ತು ಭಾಷೆಗಿರುವ ಲಿಪಿಗೆ ಹೆಸರಿಡುವುದಾಗಿದೆ. ಭಾಷೆಗೆ ತೆಲುಗು ಎಂದು ಹೇಳುವುದರಲ್ಲಿ ಪರಮಾತ್ಮ, ಆತ್ಮ, ಜೀವಾತ್ಮಯೆನ್ನುವ ಭಾವನೆಯಿದೆ. **ತೆ–ಪರಮಾತ್ಮ, ಲು–ಆತ್ಮ, ಗು–ಜೀವಾತ್ಮ** ಎಂದು ನಿರ್ಣಯಿಸಿ ಹೇಳುವುದಾಗಿದೆ. ತೆಲುಗು ಭಾಷೆಗಿರುವ ಲಿಪಿಯನ್ನು ಪ್ರತ್ಯೇಕವಾಗಿ ಅಕ್ಷರಗಳೆಂದು ಜ್ಞಾನ ಸಂಬಂಧ, ಆತ್ಮ ಸಂಬಂಧವಾದ ಹೆಸರಿಟ್ಟಿದ್ದಾನೆ. ಇದರಿಂದ ತೆಲುಗು, ಅಕ್ಷರಗಳು ಎನ್ನುವ ಮಾತು ಸ್ಥಿರಸ್ಥಾಯಿ ಯಾಗಿ ನಿಂತುಹೋಗಿದೆ. ತೆಲುಗು ಅಕ್ಷರಗಳನ್ನು ಬಿಡಿಸಿ ಹೇಳಿದರೆ, 'ತೆಲುಗು'

ಭಾಷೆ, 'ಅಕ್ಷರಗಳು' ಲಿಪಿ ಆಗುತ್ತವೆ. ಈದಿನ ಅನೇಕ ಭಾಷೆಗಳಿವೆ. ಅವುಗಳಲ್ಲಿ ಕೆಲವುಗಳಿಗೆ ಲಿಪಿಯಿದೆ. ಆದರೂ ಆ ಭಾಷೆಯ ಹೆಸರುಗಳಲ್ಲಿ ಅರ್ಥವಿಲ್ಲ. ಹಾಗೇ ಭಾಷೆಯೊಂದರ ಲಿಪಿಯಲ್ಲಿ ಕೂಡಾ ಅರ್ಥವಿಲ್ಲ. ಭಾಷೆಗೆ ಅರ್ಥ, ಮತ್ತು ಭಾಷೆಯೊಂದರ ಲಿಪಿಗೆ ಅರ್ಥ ಒಂದು ತೆಲುಗು ಭಾಷೆಗೇ ಇದೆಯೆಂದು, **ತೆಲುಗು ಭಾಷೆ "ಜ್ಞಾನಚಿಹ್ನೆ" ಯಾಗಿ** ಭೂಮಿ ಮೇಲೆ ತಯಾರಾಗಿದೆಯೆಂದು, ಆ ವಿಷಯ ಇಲ್ಲಿಯವರೆಗು ಯಾರಿಗೂ ತಿಳಿದಿಲ್ಲವೆಂದು ಹೇಳುತ್ತಿದ್ದೇವೆ.

**ಪ್ರಶ್ನೆ :– ಯಾರಿಗೂ ತಿಳಿಯದೆಂದು ನೀವು ಹೇಳಿದಾಗ ಎಲ್ಲರಲ್ಲಿ ನೀವು ಕೂಡಾ ಒಬ್ಬರಲ್ಲವೆ! ನಿಮಗೆ ಹೇಗೆ ತಿಳಿದಿದೆ?**

**ಉತ್ತರ :–** ಎಲ್ಲರಲ್ಲಿ ನಾನು ಒಬ್ಬನೇ! ಆದರೆ ನಾನು ಒಬ್ಬನು ಎಲ್ಲರಂತೆ 'ಗು' ಆಗಿ ಇಲ್ಲ, 'ತೆ' ಆಗಿ ಇಲ್ಲ. 'ಲು' ಗೆ ಹತ್ತಿರವಾಗಿ ಎಂದರೆ ಜೊತೆಯಲ್ಲಿರುವುದರಿಂದ 'ಲು' ಒಂದರ ಶಕ್ತಿ ನನಗೆ ಸ್ವಲ್ಪಬಂದು ನಿಮಗೆ ತಿಳಿಯದಿರುವುದು ನಾನು ಹೇಳುತ್ತಿದ್ದೇನೆಂದು ನೀವು ಅಂದುಕೊಳ್ಳಬಹುದು ಅಲ್ಲವೆ! ನಾನು ದೇವರೊಂದಿಗೆ ಅಂಟಿಕೊಂಡಿಲ್ಲ. ಆತ್ಮದ ಜೊತೆಯಲ್ಲಿದ್ದೇನೆ, ಅಂದರೆ ಹತ್ತಿರವಾಗಿ ಇದ್ದೇನೆ. ನನ್ನ ಪಕ್ಕದಲ್ಲಿಯೇ ಆತ್ಮ ಇರುವುದರಿಂದ, ಆತ್ಮಗೆ ತಿಳಿದಿರುವ ರಹಸ್ಯವನ್ನು ನಾನು ಸ್ವಲ್ಪ ಕೇಳಿ ತಿಳಿದುಕೊಂಡು ನಿಮಗೆ ಹೇಳುತ್ತಿದ್ದೇನೆ ಎಂದು ನೀವು ಅಂದುಕೊಳ್ಳಬಹುದಲ್ಲವೆ!

**ಪ್ರಶ್ನೇ :– ಶರೀರದಲ್ಲಿ ನೀವಿದ್ದೀರಾ, ಆತ್ಮಯಿದೆ. ನೀವು ಹೇಗಿದ್ದೀರೊ ನಾವು ಶರೀರದಲ್ಲಿ ಹಾಗೇ ಇದ್ದೇವೆ. ನಾವು ಕೂಡಾ ಆತ್ಮಪಕ್ಕದಲ್ಲಿಯೇ ಇದ್ದೇವೆ ಅಲ್ಲವೆ! ನಾವು ಕೇಳಿದರೆ ಹೇಳದ ಆತ್ಮ ನೀವು ಕೇಳಿದರೆ ಹೇಳುವುದೇನು?**

**ಉತ್ತರ :–** ನಿನ್ನ ಪಕ್ಕದಲ್ಲಿ ಆತ್ಮ, ಆತ್ಮ ಪಕ್ಕದಲ್ಲಿ ನೀನು ಇರುವುದು ವಾಸ್ತವವೇ! ಆದರೆ ಆತ್ಮ ಇದೆಯೆಂದು ನಿನಗೆ ಇಲ್ಲಿಯವರೆಗೂ ತಿಳಿದಿಲ್ಲ. ಈಗೀಗಲೇ ನಾವು ಹೇಳುವುದರಿಂದ ತಿಳಿದಿದೆ. ಆದರೆ ನೀನು ಆತ್ಮ ವಿಷಯವನ್ನು ಪೂರ್ತಿ ತಿಳಿಯದ ಮೊದಲೇ ಕೇಳುತ್ತಿದ್ದೀಯಾ. ಆತ್ಮ ಸುಲಭವಾಗಿ ಯಾರಿಗೂ

ಅರ್ಥವಾಗುವುದಲ್ಲ. ಈಗ ನೀನು ಕೇಳಿದರೂ ಆತ್ಮಕಡೆ ತಿರುಗಿ ಕೇಳಲಿಲ್ಲ. ಆತ್ಮ ನಿನ್ನ ಹಿಂಬದಿಯಲ್ಲಿ ಇದ್ದರೆ ಮುಂದುಗಡೆ ಕೇಳುತ್ತಿದ್ದೀಯಾ. ಹಾಗೇ ಆತ್ಮ ನಿನ್ನಮುಂದುಗಡೆ ಇದ್ದಾಗ ಹಿಂತಿರುಗಿ ಹಿಂದುಗಡೆ ಕೇಳುತ್ತಿದ್ದೀಯಾ. ಆದ್ದರಿಂದ ನಿನಗೆ ಆತ್ಮ ಏನು ಹೇಳಲಿಲ್ಲ.

ಪ್ರಪಂಚದಲ್ಲಿ ಇಲ್ಲಿಯವರೆಗು ಯಾರಿಗೂ ತಿಳಿಯದಿರುವುದು ಆತ್ಮ. ಆತ್ಮವನ್ನು ತಿಳಿಯುವುದಕ್ಕೆ ಬ್ರಹ್ಮವಿದ್ಯೆಯನ್ನು ಎಷ್ಟೋ ಕಲಿಯಬೇಕಾಗಿದೆ. ಆತ್ಮವನ್ನು ಕುರಿತು ತಿಳಿಯುವ ಮುನ್ನ ಇತ್ತ ಪರಮಾತ್ಮ ಜ್ಞಾನವನ್ನು, ಅತ್ತ ಜೀವಾತ್ಮ ವಿಷಯವನ್ನು ಪೂರ್ತಿಯಾಗಿ ತಿಳಿಯಬೇಕಾಗಿದೆ. ನಿಮಗೆ ಸಂಪೂರ್ಣವಾಗಿ ಆತ್ಮವನ್ನು ಕುರಿತು ತಿಳಿಯಬೇಕೆಂದರೆ ಮೂರು ದೈವಗ್ರಂಥಗಳನ್ನು ಅಸೂಯೆ ಇಲ್ಲದೆ **ಭಕ್ತಿಶ್ರದ್ಧೆಗಳಿಂದ** ಓದಬೇಕಾಗಿರುತ್ತದೆ. ನನ್ನ ಮತ, ನಿನ್ನ ಮತ ಎನ್ನುವ ದುರಭಿಪ್ರಾಯಗಳನ್ನು ಇಟ್ಟುಕೊಳ್ಳದೆ, ಮೊಟ್ಟಮೊದಲು ಸೂರ್ಯನು ಭೂಮಿಮೇಲೆ ಹೇಳಿದ ಜ್ಞಾನವೇ ಮೂರು ಗ್ರಂಥಗಳಲ್ಲಿ ಇದೆಯೆನ್ನುವ ಸತ್ಯವನ್ನು ತಿಳಿದು ಮೂರು ಗ್ರಂಥಗಳಲ್ಲಿನ ಜ್ಞಾನವನ್ನು ತಿಳಿಯಿರಿ. ಆಗ ಆತ್ಮ ಮಾಡುವ ಅದ್ಭುತಗಳು, ವಿಶೇಷಗಳು ಎಲ್ಲವೂ ತಿಳಿಯಬಲ್ಲವು. ಆತ್ಮ ಪಕ್ಕದಲ್ಲಿಯೇ ಇದ್ದರೂ ನಮಗೆ ತಿಳಿಯದಂತೆ ಮಾಡುತ್ತಿದೆಯೆಂದರೆ ಅದು ಅದ್ಭುತ ಅಲ್ಲವಾ! ಪ್ರಪಂಚದಲ್ಲಿ ಎಷ್ಟೋ ಮೇಧಾವಿಯಾಗಿರುವವನು ಆತ್ಮ ವಿಷಯದಲ್ಲಿ ಪೂರ್ತಿ ಅಜ್ಞಾನಿಯಾಗಿ ಇದ್ದಾನೆಂದರೆ, ಆತ್ಮ ಅವನನ್ನು ಮಾಯೆಮಾಡಿ ಅವನ ದೃಷ್ಟಿಯನ್ನು ತನ್ನಕಡೆ ಇಲ್ಲದಂತೆ ಮಾಡುವುದು ಅದ್ಭುತ ಅಲ್ಲವಾ! ಹೀಗೆ ಆತ್ಮ ಮನುಷ್ಯರನ್ನು ಅನೇಕ ವಿಧಗಳಾಗಿ ಸ್ವತಃವಾಗಿ ನಡೆಸುತ್ತಾ ಯಾರಿಗೂ ತಿಳಿಯದಂತೆ, ಏನು ಮಾಡದಂತಿರುವುದು ವಿಶೇಷ ಅಲ್ಲವಾ! ನಿಮಗೆ ಆತ್ಮ ವಿಷಯ ಚೆನ್ನಾಗಿ ಅರ್ಥವಾಗುವುದಕ್ಕೆ ಆತ್ಮವನ್ನು ಕುರಿತು ಸ್ವಲ್ಪ ಸಮಾಚಾರವನ್ನು ಕೆಳಗೆ ನೋಡಿರಿ.

1. ಸಮಸ್ತ ಜೀವರಾಶಿಗಳಲ್ಲಿ ಬೆರೆತಿದೆ ಆತ್ಮ!
2. ಅಖಿಲ ಜೀವಿಗಳಲ್ಲಿ ಒಂದೇ ಚೈತನ್ಯವಾಗಿದೆ ಆತ್ಮ!

3. ಗಾಳಿಯಲ್ಲಿ ಗಂಧ ಬೆರೆತು ಕಾಣಿಸದಂತೆ, ಶರೀರದಲ್ಲಿ ಕಣ್ಣಿಗೆ ಕಾಣಿಸದೆ ಇದೆ ಆತ್ಮ!
4. ಸಾಕ್ಷಿಯಾಗಿ ಎಲ್ಲಾ ಶರೀರಗಳಲ್ಲಿದ್ದರೂ ಎಲ್ಲರಲ್ಲಿ ಇರುವುದು ಆತ್ಮ!
5. ಶಕ್ತಿರೂಪದಲ್ಲಿ ಶರೀರವೆಲ್ಲವೂ ವ್ಯಾಪಿಸಿದೆ ಆತ್ಮ!
6. ಸಮಸ್ತ ಜೀವಿಗಳಲ್ಲಿ ಕಾರ್ಯರೂಪವಾಗಿದೆ ಆತ್ಮ!
7. ಸಮಸ್ತ ಜೀವಿಗಳಲ್ಲಿ ಚೈತನ್ಯವಾಗಿದೆ ಆತ್ಮ!
8. ಮೂರು ಆತ್ಮಗಳಲ್ಲಿ ಎರಡನೆಯದಾಗಿದೆ ಮಧ್ಯಾತ್ಮ!
9. ಅಖಿಲ ಜೀವರಾಶಿಗಳಲ್ಲಿ ಎಲ್ಲಾ ಕೆಲಸಗಳು ಮಾಡುತ್ತಿರುವುದು ಆತ್ಮ!
10. ಸಮಸ್ತ ಜೀವರಾಶಿಗಳಲ್ಲಿ ಚೈತನ್ಯರೂಪವಾಗಿ ಖಂಡ ಖಂಡಗಳಾಗಿ ಶರೀರದಲ್ಲಿ ವ್ಯಾಪಿಸಿದೆ ಆತ್ಮ!
11. ಸರ್ವ ಜೀವರಾಶಿಗಳಲ್ಲಿ ನಿವಾಸಿಸುತ್ತಾ, ಆಯಾ ಶರೀರ ಆಕಾರ ಹೊಂದಿದೆ ಆತ್ಮ!
12. ಶರೀರವೆನ್ನುವ ಗುಡಿಯಲ್ಲಿ ದೀಪವಾಗಿ ಶರೀರವೆಲ್ಲದಕ್ಕು ಬೆಳಕು ಕೊಡುತ್ತಿದೆ ಆತ್ಮ!
13. ಸಮಸ್ತ ಶರೀರಗಳಲ್ಲಿ ಜೀವಿಯೊಂದಿಗೆ ಇರುತ್ತಾ, ಆ ಶರೀರಕ್ಕೆ ಶಕ್ತಿಕೊಡುವುದು ಆತ್ಮ!
14. ಮೂವರು ಪುರುಷರಲ್ಲಿ ಅಕ್ಷರ ಪುರುಷನಾಗಿ ಶರೀರದಲ್ಲಿರುವುದು ಆತ್ಮ!
15. ಪ್ರತಿ ಶರೀರದಲ್ಲಿ ಜೀವಾತ್ಮಗಳಿಗೆ ಸಾಕ್ಷಿಯಾಗಿರುವುದು ಆತ್ಮ!
16. ಇಂದ್ರಿಯಗಳಿಗೆ ಶಕ್ತಿಕೊಡುವುದು ಆತ್ಮ!
17. ಕೊಲಿಮೆ ಉರಿಗೆ ಗಾಳಿಚೀಲ, ಚೀಲವನ್ನು ಕದಲಿಸುವ ಕಟ್ಟಿಗೆ, ಕಟ್ಟಿಗೆಗೆ ಕೊನೆಯಲ್ಲಿ ಕುಳಿತುಕೊಂಡು ಕದಲಿಸುತ್ತಿರುವ ವ್ಯಕ್ತಿ, ಹೇಗೆ ಅನುಸಂಧಾನವಾಗಿದ್ದಾರೋ, ಹಾಗೇ ಶರೀರದಲ್ಲಿ ಮೂಗಿನಲ್ಲಿನ ಶ್ವಾಸಕ್ಕೆ ಶ್ವಾಸಕೋಶಗಳು, ಶ್ವಾಶಕೋಶಗಳಿಗೆ ಬ್ರಹ್ಮನಾಡಿ, ನಾಡಿಗೆ ಕೊನೆಯಲ್ಲಿದ್ದು ಎಲ್ಲವನ್ನು ಕದಲಿಸುವುದು ಆತ್ಮ!

18. ಶರೀರದಲ್ಲಿ ಶ್ವಾಸವನ್ನು ನಡೆಸುವುದು ಆತ್ಮ!
19. ಸಮಸ್ತ ಜೀವಿಗಳಲ್ಲಿ ಒಂದೇಕೆಲಸ ಮಾಡುತ್ತಿರುವುದು ಆತ್ಮ!
20. ಎರಡನೆ ಆತ್ಮವಾಗಿ ಶರೀರದಲ್ಲಿ ಎಲ್ಲಾ ಕೆಲಸಗಳು ಮಾಡುತ್ತಿರುವುದು ಆತ್ಮ!
21. ಶರೀರದಲ್ಲಿ ನಿವಾಸವಿರುತ್ತಿರುವ ಮೂರು ಆತ್ಮಗಳಲ್ಲಿ ಅಹರ್ನಿಶೆಗಳು ಜೀವಾತ್ಮನನ್ನು ಕಾದುಕೊಂಡಿರುವುದು, ಎರಡನೆ ಆತ್ಮ!
22. ಮೂವರು ಪುರುಷರಲ್ಲಿ ಮಧ್ಯದವನಾಗಿ, ಪೂಜ್ಯನಾಗಿರುವುದು ಆತ್ಮ!
23. ಸಮಸ್ತ ಸಜೀವ ಶರೀರಗಳಲ್ಲಿ ನಖ, ಶಿಖ ಪರ್ಯಂತವೂ ವ್ಯಾಪಿಸಿ ಶರೀರದಲ್ಲಿನ ಎಲ್ಲಾ ಅವಯವಗಳಿಂದ ಕೆಲಸಗಳು ಮಾಡಿಸುತ್ತಿರುವುದು ಆತ್ಮ!
24. ಶರೀರದಲ್ಲಿನ ಜೀವಿಗೆ ಸಾಕ್ಷಿಯಾಗಿರುವುದು ಆತ್ಮ!
25. ಹೂವಿನಹಾರದಲ್ಲಿ ಆಧಾರವಾಗಿ ಕಣ್ಣಿಗೆ ಕಾಣದ ದಾರದಂತೆ ಶರೀರದಲ್ಲಿ ಕಾಣಿಸದೆ ಶರೀರಗಳೆಲ್ಲದಕ್ಕು ಆಧಾರವಾಗಿದೆ ಆತ್ಮ!
26. ಶರೀರಾಂತರ್ಗತಗಳಲ್ಲಿ ಇದ್ದು ಜ್ಞಾನದಿಂದ ಹೊಗಳಲ್ಪಡುವಂಥದ್ದು ಆತ್ಮ!
27. ಸಮಸ್ತ ಜೀವ ಶರೀರಗಳಲ್ಲಿ ಮೂರು ಗುಣಗಳ ಮಧ್ಯ ಸಾಕ್ಷಿಯಾಗಿದೆ ಆತ್ಮ!
28. ಅಖಿಲ ಜೀವಿಗಳೊಂದಿಗೆ ಕೂಡಿದೆ ಆತ್ಮ!
29. ಸಮಸ್ತ ಜೀವರಾಶಿಗಳಲ್ಲಿರುವ ಮೂರು ಆತ್ಮಗಳಲ್ಲಿ ಮಧ್ಯದಲ್ಲಿರುವುದು ಆತ್ಮ!
30. ಚಿಕ್ಕ ಇರುವೆಯಲ್ಲಿಯೂ ದೊಡ್ಡ ಆನೆಯಲ್ಲಿಯೂ ಒಂದೇ ವಿಧಾನಹೊಂದಿ ಕರ್ಮವನ್ನು ಪಾಲಿಸುವುದು ಆತ್ಮ!
31. ಶರೀರದಲ್ಲಿನ ಎಲ್ಲ ಭಾಗಗಳಿಗೂ ಶಕ್ತಿಯನ್ನು ಕೊಡುತ್ತಾ ಯಾರಿಗೂ ತಿಳಿಯದಂತೆ ಇರುವುದು ಆತ್ಮ!
32. ಎಲ್ಲರ ಶರೀರಗಳಲ್ಲಿ ಯಾರಿಗೂ ತಿಳಿಯದಂತೆ ನಿದ್ರೆಯಲ್ಲಿಯೂ, ಎಚ್ಚರದಲ್ಲಿಯೂ ಎಲ್ಲರಲ್ಲಿಯೂ ಕೆಲಸ ಮಾಡುತ್ತಿದೆ ಆತ್ಮ!

33. ಅದ್ವೈತಾದಿ ಮಹಾ ಮುನಿಗಳುಶರೀರದಲ್ಲಿ ಇರುವುದು ನಾನು ಒಬ್ಬನೇಯೆಂದು ಹೇಳಿಕೊಳ್ಳುತ್ತಿದ್ದರೂ ಆತ್ಮ ಮಾತ್ರ ಬೇರೆಯಾಗಿದ್ದು ಜೀವಿಯ ಕರ್ಮವನ್ನನುಸರಿಸಿ ಶರೀರವನ್ನು ಕದಲಿಸುತ್ತಾ, ನಡೆಯುವ ಯಾವ ಕರ್ಮಕ್ಕೂ ಜವಾಬ್ದಾರನು ಅಲ್ಲದಿರುವುದು ಆತ್ಮ!
34. ಶರೀರದಲ್ಲಿ ಅಣುಅಣುವಿನಲ್ಲೂ ವ್ಯಾಪಿಸಿ ವಿಧಿಯನ್ನು ಅನುಸರಿಸಿ ಶಕ್ತಿಕೊಡುವುದು ಆತ್ಮ!
35. ಶರೀರದಲ್ಲಿ ಬಾಹ್ಯ ಪ್ರಪಂಚದೊಂದಿಗೆ ಸಂಬಂಧ ಇಟ್ಟುಕೊಂಡು ಎಲ್ಲಾ ವೇಳೆಯಲ್ಲೂ ಕೆಲಸಮಾಡುತ್ತಿರುವುದು ಆತ್ಮ!
36. ಶರೀರದಲ್ಲಿ ಯಾವ ಮಾತ್ರ ನಿದ್ರೆ ಇಲ್ಲದಂತೆ ಯಾವಾಗಲೂ ಎಚ್ಚರದಿಂದ ಕೆಲಸಮಾಡುತ್ತಿರುವುದು ಆತ್ಮ!
37. ಒಂದೊಂದು ಶರೀರದಲ್ಲಿ ಒಂದೊಂದು ಆತ್ಮವಾಗಿ, ಜೀವಾತ್ಮನಿಗೆ ಜೊತೆಯಾಗಿರುವುದು ಆತ್ಮ!
38. ಶರೀರಾಂತರ್ಗತವಾಗಿ ಬಾಹ್ಯ ದೃಷ್ಟಿಗೆ ಕಾಣಿಸದೆ, ಜೀವಾತ್ಮಗಳಾದ ಸ್ವಾಮಿಗಳು, ಮುನಿಗಳು ಸಹ ನಾನೇ ಆತ್ಮನೆಂದು ತಿಳಿಯುವಹಾಗೆ ಮಾಡಿ ತಾನು ಮಾತ್ರ ಬೇರೆಯಾಗಿದೆ ಆತ್ಮ!
39. ಜೀವಾತ್ಮಗು ಪರಮಾತ್ಮಗು ಮಧ್ಯದಲ್ಲಿರುವುದು ಆತ್ಮ!
40. ಗಿಡದಲ್ಲಿ ತೇವಾಂಶ ವ್ಯಾಪಿಸಿದಂತೆ, ಶರೀರದಲ್ಲಿ ಶಕ್ತಿಯಾಗಿ ವ್ಯಾಪಿಸಿರುವುದು ಆತ್ಮ!
41. ಕಬ್ಬಿಣದೊಂದಿಗೆ ಸೇರಿದ ಅಗ್ನಿಗೆಸಹ ಕುಲುಮೆ ಹತ್ತಿರ ಚಮಟಿಗೆ ಹೊಡತಗಳು ತಪ್ಪುವುದಿಲ್ಲ ಎನ್ನುವಂತೆ, ಜೀವಿಯೊಂದಿಗೆ ಸೇರಿ ಶರೀರವೆಲ್ಲಾ ವ್ಯಾಪಿಸಿ ಆಗಾಗ ಹಸಿವಿಗೆ ಶಕ್ತಿಹೀನತೆ ಹೊಂದುತ್ತಿದೆ ಆತ್ಮ!
42. ಶರೀರದಲ್ಲಿ ಬ್ರಹ್ಮನಾಡಿಯನ್ನು ಕೇಂದ್ರವಾಗಿ ಮಾಡಿಕೊಂಡು ಶರೀರವೆಲ್ಲಾ ವ್ಯಾಪಿಸಿರುವುದು ಆತ್ಮ!
43. ಜೀವಾತ್ಮನಿಗೆ ದೊಡ್ಡವನು, ಪರಮಾತ್ಮನಿಗೆ ಚಿಕ್ಕವನಾಗಿರುವುದು ಆತ್ಮ!

44. ಸಮಸ್ತ ಶರೀರಗಳಲ್ಲಿ ನಾಶವಾಗುವ ಜೀವಾತ್ಮದೊಂದಿಗೆ ಸೇರಿ ನಿವಾಸ ಮಾಡುತ್ತಿದ್ದರೂ ನಾಶವಾಗದಿರುವುದು ಆತ್ಮ!
45. ಶರೀರದಲ್ಲಿ ಮಾತ್ರ ಶಕ್ತಿಯಾಗಿರುವ ಎರಡನೆಯದು ಆತ್ಮ!
46. ಶರೀರದಲ್ಲಿ ಕರ್ಮಾನುಸಾರ ಚಲನೆಯನ್ನುಕೊಡುತ್ತಾ, ಕರ್ಮಾನುಸಾರ ರೋಗಗಳು ಉಂಟುಮಾಡುತ್ತಾ, ಅವುಗಳನ್ನು ಅನುಭವಿಸುವಂತೆ ಮಾಡುವುದು ಆತ್ಮ!
47. ಶರೀರದಲ್ಲಿನ ಮೂರು ಆತ್ಮಗಳಲ್ಲಿ ಮಧ್ಯ ಆತ್ಮವಾಗಿ ಶರೀರವನ್ನು ನಡೆಸುವ ಶಕ್ತಿ ಇರುವುದು ಆತ್ಮ!
48. ಶರೀರದಲ್ಲಿ ಯಾರೂ ಗುರುತಿಸಲಾರದ ವಿಧವಾಗಿ ಶರೀರ ಆಕೃತಿಯನ್ನು ಹೋಲಿರುವುದು ಆತ್ಮ!
49. ಶರೀರದಲ್ಲಿನ ಬ್ರಹ್ಮನಾಡಿಯನ್ನು ಸ್ಥಾವರವಾಗಿ ಏರ್ಪಡಿಸಿಕೊಂಡು ಶರೀರವೆಲ್ಲಾ ನಖ ಶಿಖ ಪರ್ಯಂತ ವ್ಯಾಪಿಸಿ ಶರೀರಾಕೃತಿಯನ್ನು ಹೋಲಿರುವುದು ಆತ್ಮ!
50. ಶರೀರದೊಳಗೆ ನಡೆಯುವ ಸಮಸ್ತ ಕಾರ್ಯಗಳಿಗೂ ಸಾಕ್ಷಿಯಾಗಿದೆ ಆತ್ಮ!
51. ಅಕಾಲ ಮರಣ ಹೊಂದಿದವನಿಗೆ ಶರೀರ ಹೋದರೂ ಅದೇ ಶರೀರಾಕೃತಿ ಹೊಂದಿ, ಸೂಕ್ಷ್ಮವಾಗಿ ಕಾಣಿಸದೆ ಅವನ ಕರ್ಮಾನುಸಾರ ಆಡಿಸುವುದು ಆತ್ಮ!
52. ಮರಣವಿದ್ದು ನಾಶವಿಲ್ಲದ್ದು ಆತ್ಮ!
53. ಆಕಾಶದಲ್ಲಿರುವ ಸೂರ್ಯನೊಬ್ಬನೇ ಪ್ರಪಂಚವೆಲ್ಲವನ್ನೂ ತನ್ನ ಬೆಳಕಿನಿಂದ ಪ್ರಕಾಶಿಸುವಂತೆ ಮಾಡಿದ ಹಾಗೆ, ಬ್ರಹ್ಮನಾಡಿಯಲ್ಲಿದ್ದು ಶರೀರವೆಲ್ಲಾ ಚೈತನ್ಯವಾಗಿ ವ್ಯಾಪಿಸಿದೆ ಆತ್ಮ!
54. ಶರೀರ ಗೃಹದಲ್ಲಿ ಯಜಮಾನನಾಗಿರುವುದು ಅತ್ಮ!
55. ಹೃದಿ ಮಧ್ಯದಲ್ಲಿ ನಿವಾಸಮಾಡುತ್ತಾ ಸೂತ್ರಧಾರಿಯಾಗಿದ್ದು ಜೀವಿಯ ಪಾತ್ರದಾರನಾಗಿ ಆಡಿಸುವುದು ಆತ್ಮ!

56. ಸಮಸ್ತ ಜೀವಿಗಳಲ್ಲಿ ಏಕಕಾರ್ಯ ಸ್ವರೂಪವಾಗಿದೆ ಆತ್ಮ!
57. ಪುರುಷರಲ್ಲಿ ಎರಡನೆಯವನಾದ ಅಕ್ಷರ ಪುರುಷನು ಆತ್ಮ!
58. ಸಮಸ್ತ ಜೀವಿಗಳಲ್ಲಿ ಚಲನ ಶಕ್ತಿಯನ್ನು ಕೊಡುವುದು ಆತ್ಮ!
59. ಮೊದಲು ತಾನಿದ್ದು ತನ್ನ ಹಿಂದೆ ಜೀವಿಯನ್ನು ಇಟ್ಟುಕೊಂಡಿರುವುದು ಆತ್ಮ!
60. ಪರಮಾತ್ಮನನ್ನು ಪಕ್ಕದಲ್ಲಿಟ್ಟುಕೊಂಡು ಜೀವಿಯೊಂದಿಗೆ ಬೆರೆತಿದ್ದು ಶರೀರದಿಂದ ಕೆಲಸಗಳು ಮಾಡುವುದು ಆತ್ಮ!
61. ಎಲ್ಲ ಜೀವಿಗಳಲ್ಲಿ ಬೇರೆಬೇರೆಯಾಗಿ ಬೆರೆತಿರುವುದು ಆತ್ಮ!
62. ಶರೀರದ ಹೊರಗೆ ಯಾವ ಕಾರಣಕ್ಕೂ ಇಲ್ಲದೆ ಒಳಗೆ ಮಾತ್ರ ಚೈತನ್ಯವಾಗಿ ಇರುವುದು ಆತ್ಮ!
63. ಅಖಿಲ ಜೀವಿಗಳಲ್ಲಿ ಬೆರೆತಿರುವುದು ಆತ್ಮ!
64. ಮೂರು ಗುಣಗಳಿಗೆ ಬೇರೆಯಾಗಿರುವುದು ಆತ್ಮ!
65. ಜೀವಿಗಳ ಪಕ್ಕದಲ್ಲೇ ಇರುವುದು ಆತ್ಮ!
66. ಕಾದ ಕಬ್ಬಿಣದಲ್ಲಿ ಅಗ್ನಿ ಇದ್ದಹಾಗೆ, ಸಮಸ್ತ ಜೀವಿಗಳ ಶರೀರಗಳಲ್ಲಿ ಒಳಗೊಂಡಿರುವುದು ಆತ್ಮ!
67. ಸೂರ್ಯನೊಬ್ಬನು ಈ ಲೋಕವನ್ನು ಪ್ರಕಾಶಿಸುವಂತೆ ಮಾಡಿದಹಾಗೆ, ಶರೀರವೆಲ್ಲವನ್ನೂ ತಾನೊಬ್ಬನೇ ಪ್ರಕಾಶಿಸುವಂತೆ ಮಾಡುವುದು ಆತ್ಮ!
68. ನಾಶರಹಿತನಾಗಿ ನಾಶವಾಗುವ ಜೀವಾತ್ಮದೊಂದಿಗೆ ಕೂಡಿರುವುದು ಆತ್ಮ!
69. ಮಣಿಗಳ ಮಧ್ಯದಲ್ಲಿ ದಾರವಿದ್ದಂತೆ, ಜೀವಿಗಳ ಶರೀರ ಮಧ್ಯದಲ್ಲಿ ಶರೀರವೆಲ್ಲದಕ್ಕೂ ಆಧಾರವಾಗಿರುವುದು ಆತ್ಮ!
70. ಬಿಡುವಿಲ್ಲದೆ ಎಲ್ಲ ಕಾಲಗಳಲ್ಲಿ ಜೀವಿಯೊಂದಿಗೆ ಬೆರೆತಿರುವುದು ಆತ್ಮ!
71. ಚರ ಪ್ರಕೃತಿಯಾದ ಶರೀರವೆಲ್ಲಾ ವ್ಯಾಪಿಸಿರುವುದು ಆತ್ಮ!
72. ಪಂಚಭೂತ ನಿರ್ಮಾಣವಾದ ಶರೀರಕ್ಕೆ ಆಧಾರವಾಗಿರುವುದು ಆತ್ಮ!

73. ಪರಮಾತ್ಮವೂ ಅಲ್ಲದೆ, ಜೀವಾತ್ಮವೂ ಅಲ್ಲದೆ ಕೇವಲ ಆತ್ಮವಾಗಿ ಜೀವಾತ್ಮದೊಂದಿಗೆ ಶರೀರದಲ್ಲಿರುವುದು ಆತ್ಮ!
74. ಮೊದಲನೆಯದಾದ ಜೀವಾತ್ಮನಿಗು, ಮೂರನೆಯದಾದ ಪರಮಾತ್ಮನಿಗು ಮಧ್ಯೆ ಸಂಧಾನವಾಗಿರುವ ಎರಡನೆಯದು ಆತ್ಮ!
75. ಕಾದ ಕಬ್ಬಿಣದಲ್ಲಿ ಕಬ್ಬಿಣವೆಲ್ಲಾ ಅಗ್ನಿ ವ್ಯಾಪಿಸಿದ್ದಂತೆ, ಶರೀರವೆಲ್ಲಾ ವ್ಯಾಪಿಸಿರುವುದು ಆತ್ಮ!
76. ಪರಮಾತ್ಮ ಪಾಲಿಸುವ ವಿಶ್ವವೆನ್ನುವ ಸಾಮ್ರಾಜ್ಯದಲ್ಲಿ ಶರೀರವೆನ್ನುವ ಸಾಮಂತ ರಾಜ್ಯಕ್ಕೆ ರಾಜಾಗಿರುವುದು ಆತ್ಮ!
77. ಪ್ರಪಂಚವೆಲ್ಲದಕ್ಕೂ ಇರುವ ಮೂವರು ಪುರುಷರಲ್ಲಿಯೂ ಮಧ್ಯ ಪುರುಷನಾಗಿ ಅಕ್ಷರ ಪುರುಷನೆಂದು ಹೆಸರುಪಡೆದು, ಕ್ಷರಪುರುಷನಹತ್ತಿರ ನಿಂತಿರುವುದು ಆತ್ಮ!
78. ಶರೀರದಲ್ಲಿ ಸಕಲೇಂದ್ರಿಯಗಳಿಗು ಶಕ್ತಿಕೊಡುವುದು ಆತ್ಮ!
79. ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳಿಗೆ ಆಧಾರವಾಗಿರುವುದು ಆತ್ಮ!
80. ಜ್ಞಾನಿಗಳಲ್ಲಿಯೂ, ಅಜ್ಞಾನಿಗಳಲ್ಲಿಯೂ, ಮೂರ್ಖರಲ್ಲಿಯೂ, ಬುದ್ಧಿವಂತರಲ್ಲಿಯೂ, ಒಳ್ಳೆಯವರಲ್ಲಿಯೂ, ಕೆಟ್ಟವರಲ್ಲಿಯೂ, ಎಲ್ಲಾ ಮತಗಳವರಲ್ಲಿಯೂ ಒಂದೇ ಪದ್ಧತಿ ಹೊಂದಿ, ಒಂದೇ ವಿಧವಾಗಿ ರಾಗ (ಪ್ರೇಮ) ವಾಗಲೀ, ದ್ವೇಷವಾಗಲೀ ಇಲ್ಲದಂತೆ ವರ್ತಿಸುವುದು ಆತ್ಮ!
81. ಪುರುಷಾಕೃತಿಯಾದ ಈಶ್ವರಲಿಂಗದ ಮೇಲೆ ಮೂವರು ಪುರುಷರ ಗುರುತಾಗಿರುವ ಮೂರು ವಿಭೂತಿ ರೇಖೆಗಳಲ್ಲಿ ಮಧ್ಯೆ ರೇಖೆಯಾಗಿ ಗುರುತಿಸಲ್ಪಟ್ಟಿರುವುದು ಆತ್ಮ!
82. ಶರೀರದಲ್ಲೇ ದೃಷ್ಟಿ ನಿಲ್ಲಿಸಿ ದೇವರನ್ನು ತಿಳಿಯಬೇಕೆಂದು ಪ್ರಯತ್ನಿಸುವ ಯೋಗಿಗಳಿಗೆ ತಿಳಿಯಲ್ಪಡುವ ಎರಡನೆಯದು ಆತ್ಮ!

83. ಹೂವಿನ ಹಾರಕ್ಕೆ ಆಧಾರವಾದ ದಾರದಹಾಗೆ, ಶರೀರಕ್ಕೆ ಆಧಾರವಾಗಿರುವುದು ಆತ್ಮ!

84. ಸಕಲ ಶರೀರಗಳಲ್ಲಿ ಮೂರು ಅವಸ್ಥೆಗಳಲ್ಲಿ ಚೈತನ್ಯಕೊಡುವುದು ಆತ್ಮ!

85. ಪಾಪ ಮಾಡುವಾಗ, ಪುಣ್ಯ ಮಾಡುವಾಗ ಒಂದೇ ವಿಧವಾಗಿ ಶರೀರಕ್ಕೆ ಶಕ್ತಿಯನ್ನು ಕೊಟ್ಟು, ಯಾವ ಕರ್ಮ ಅಂಟದಂತೆ ಇರುವುದು ಆತ್ಮ!

86. ಭುವಿಯಲ್ಲಿ ಎಷ್ಟು ಜೀವರಾಶಿಗಳಿವೆಯೋ ಎಲ್ಲದರಲ್ಲೂ ಎಲ್ಲ ಆತ್ಮಗಳಾಗಿ ವಿಭಜಿಸಲ್ಪಟ್ಟು, ಪರಮಾತ್ಮ ಪ್ರತಿನಿಧಿಯಾಗಿ ಪ್ರಕೃತಿಯೊಂದಿಗೆ ಬೆರೆತು ಶರೀರದಲ್ಲಿ ಕೆಲಸ ಮಾಡುತ್ತಿರುವುದು ಆತ್ಮ!

87. ಯಾವ ವಿಷಯದೊಂದಿಗೆ ಸಂಬಂಧ ಇಲ್ಲದಂತೆ ಶರೀರದಲ್ಲಿನ ಕರ್ಮ ಪ್ರಕಾರ ಶರೀರವನ್ನು ನಡೆಸುವುದು ಆತ್ಮ!

88. ಶರೀರದೊಳಗಿನ ಬ್ರಹ್ಮನಾಡಿವೊಂದರ ಏಳು ದ್ವಾರಗಳಿಂದ ಮತ್ತು ಗ್ರಂಥಿಗಳೊಂದರ ಏಳು ದ್ವಾರಗಳಿಂದ ಶರೀರವನ್ನು ಪಾಲಿಸುವುದು ಆತ್ಮ!

89. ಸಮಸ್ತ ಜೀವರಾಶಿಗಳ ಬುದ್ಧಿಗೆ ಸಮಾನವಾಗಿ ಅರ್ಥವಾಗುವುದು ಆತ್ಮ!

90. ಅಯಮಾತ್ಮ ಬ್ರಹ್ಮವೆಂದು ಸಮಸ್ತ ಯೋಗಿಗಳಿಂದ ಉಚ್ಚರಿಸಲ್ಪಡುವುದು ಆತ್ಮ!

91. ಜಾಗ್ರತೆ, ಸ್ವಪ್ನ, ನಿದ್ರೆ ಎನ್ನುವ ಮೂರವಸ್ಥೆಗಳಿಗು ಸಾಕ್ಷಿಯಾಗಿರುವುದು ಆತ್ಮ!

92. ಮೂರು ಆತ್ಮಗಳಲ್ಲಿ ಮಧ್ಯ ಆತ್ಮವಾಗಿ, ಸಮಸ್ತ ಯೋಗಿಗಳಿಂದ ಆರಾಧಿಸಲ್ಪಡುವುದು ಆತ್ಮ!

93. ಶರೀರದೊಳಗಿನ 25 ಭಾಗಗಳಿಗೆ ಅತೀತವಾಗಿದ್ದು, ಶರೀರವೆಲ್ಲದಕ್ಕೂ ಶಕ್ತಿ ಕೊಡುವುದು ಆತ್ಮ!

94. ಪರಮಾತ್ಮನಿಗಿಂತ ಕಡಿಮೆಯವನಾಗಿ, ಜೀವಾತ್ಮಗಿಂತ ದೊಡ್ಡವನಾಗಿದೆ ಆತ್ಮ!

95. ಮನೆಯಲ್ಲಿ ವಿದ್ಯುತ್ ಶಕ್ತಿಯಂತೆ, ಶರೀರದಲ್ಲಿ ಚೈತನ್ಯ ಶಕ್ತಿಯಾಗಿದೆ ಆತ್ಮ!

96. ಯೋಗಿಗಳಲ್ಲಿಯೂ, ಭೋಗಿಗಳಲ್ಲಿಯೂ ಸಮಾನ ವೃತ್ತಿ ಹೊಂದಿರುವುದು ಆತ್ಮ!
97. ಶರೀರದಲ್ಲಿ ಅಣುಅಣುವಿನಲ್ಲೂ ವ್ಯಾಪಿಸಿ ಶರೀರಾಂತರ್ಗತ ಕೆಲಸಗಳಿಗೆ ಕಾರಣಶಕ್ತಿಯಾಗಿ ಇದೆ ಆತ್ಮ!
98. ಅಂಡಜ, ಪಿಂಡಜ, ಉದ್ಭಿಜಗಳಾದ ಮೂರು ವಿಧಗಳ ಜೀವರಾಶಿಗಳಲ್ಲಿ ಯಾವ ಜೀವರಾಶಿಯಲ್ಲಾದರೂ, ಒಂದೇ ಸಿದ್ಧಾಂತ, ಒಂದೇ ನಿರ್ಣಯವಾಗಿ, ಒಂದೇ ಪದ್ಧತಿಯಾಗಿ ಕೆಲಸ ಮಾಡುವುದು ಆತ್ಮ!
99. ಜೀವಾತ್ಮ ಯಾವ ಶರೀರದಲ್ಲಿ ಪ್ರವೇಶಿಸಿದರೂ, ಅದರ ಹಿಂದೆ ಆ ಶರೀರದಲ್ಲಿ ಪ್ರವೇಶಿಸಿ ಅಲ್ಲಿ ಕರ್ಮ ಪ್ರಕಾರ ಏನು ನಡೆಯಬೇಕೋ, ಆ ಕೆಲಸಗಳನ್ನು ಶರೀರದಿಂದ ಮಾಡಿಸುವುದು ಆತ್ಮ?
100. ಶರೀರದಲ್ಲಿ ಕೆಲಸ ತಾನು ಮಾಡಿ ಫಲಿತವನ್ನು ಜೀವಾತ್ಮನಿಗೆ ಒದಗಿಸುವುದು ಆತ್ಮ!
101. ಶರೀರದೊಳಗಿನ ಪ್ರಾಣಕ್ಕೆ ಆಧಾರವಾಗಿ ಆಡಿಸುವುದು ಆತ್ಮ!
102. ನಾನು ಹುಟ್ಟಿದಾಗಿನಿಂದ ನನ್ನಲ್ಲಿ ಎಲ್ಲ ಕೆಲಸಗಳಿಗು ಸಾಕ್ಷಿಯಾಗಿದ್ದೂ ಪ್ರಾರಬ್ಧವನ್ನು ನನ್ನಿಂದ ಅನುಭವಿಸುವಂತೆ ಮಾಡುವುದು ಆತ್ಮ!
103. ಶರೀರವೆನ್ನುವ ರಥಕ್ಕೆ ಸಾರಥಿಯಾಗಿದ್ದು, ಇಂದ್ರಿಯಗಳೆನ್ನುವ ಕುದುರೆಗಳನ್ನು ಓಡಿಸುವ ಸಾರಥಿಯಾಗಿ, ಶರೀರ ರಥವನ್ನು ಅಧಿಷ್ಠಿಸಿರುವ ಜೀವಿಗೆ ಸುಖದುಃಖಗಳೆನ್ನುವ ಅನೇಕ ಪ್ರದೇಶಗಳನ್ನು ತೋರಿಸುತ್ತಿರುವುದು ಆತ್ಮ!
104. ಗಿಡಕ್ಕೆ ತೊಗಟೆ ಅನುಬಂಧವಾಗಿರುವಂತೆ, ಶರೀರದಲ್ಲಿನ ಜೀವಾತ್ಮಕ್ಕೆ ಶಕ್ತಿ ರೂಪದಲ್ಲಿ ಅನುಬಂಧವಾಗಿರುವುದು ಆತ್ಮ!
105. ಸಂಸಾರವೆನ್ನುವ ನಾಟಕಕ್ಕೆ ಪರಮಾತ್ಮ ಸೂತ್ರಧಾರಿಯಾದಾಗ, ನಾಟಕವನ್ನು ವೀಕ್ಷಿಸುತ್ತಾ ನಾಟಕದಲ್ಲಿನ ಭಾವನೆಗಳನ್ನು ಅನುಭವಿಸುವ ಪ್ರೇಕ್ಷಕನು ಜೀವಿಯಾದಾಗ, ನಾಟಕವನ್ನು ಆಡುವುದು ಆತ್ಮ!
106. ಶರೀರದಲ್ಲಿ ಆತ್ಮ ಮಾಡುತ್ತಿದ್ದರೂ ಜೀವಾತ್ಮ ತಾನು ಮಾಡಿದಂತೆ ತಿಳಿದರೇ, ಆ ಕೆಲಸದಲ್ಲಿನ ಕರ್ಮವನ್ನು ಜೀವಿಗೆ ಅಂಟಿಸುವುದು ಆತ್ಮ!

107. ಶರೀರದಲ್ಲಿ ಪ್ರಾರಬ್ಧಕರ್ಮ ಪ್ರಕಾರ ಸುಖಃದುಃಖಗಳನ್ನು ಆಡಿಸುತ್ತಾ, ಅಹಂ ಹೊಂದಿದ ಜೀವಾತ್ಮ ಪಾಲಿಗೆ ಚಿತ್ರಗುಪ್ತನಾಗಿ, ಆಗಾಮಿಕರ್ಮವನ್ನು ಅಂಟಿಸುವುದು ಆತ್ಮ!

108. ಒಳ್ಳೆಯ ಕೆಟ್ಟ ಕರ್ಮಗಳೆನ್ನುವ ತಾರತಮ್ಯವಿಲ್ಲದೇ ಆಚರಿಸುತ್ತಾ, ಪಾಪಪುಣ್ಯಗಳಿಗೆ ಸಂಬಂಧವಿಲ್ಲದ್ದು ಆತ್ಮ!

109. ಅಜ್ಞಾನಿಗಳಲ್ಲಿ ಪ್ರಾರಬ್ಧವನ್ನು ಅನುಭವಿಸುವಂತೆ ಮಾಡುತ್ತಾ ಆಗಾಮಿಕರ್ಮವನ್ನು ಸೇರಿಸುತ್ತಾ, ಜ್ಞಾನ ತಿಳಿದ ಯೋಗಿಗಳಲ್ಲಿ ಪ್ರಾರಬ್ಧವನ್ನು ಅನುಭವಿಸುವಂತೆ ಮಾಡುತ್ತಾ, ಆಗಾಮಿಕರ್ಮವನ್ನು ಅಂತ್ಯ ಮಾಡುತ್ತಿರುವುದು ಆತ್ಮ!

110. ಶರೀರ ಯಂತ್ರಾಂಗದಲ್ಲಿ 24 ಭಾಗಗಳನ್ನು ಒಬ್ಬ ಜೀವಿಗಾಗಿ ನಡೆಸುತ್ತಾ ಪರಮಾತ್ಮನಿಗೆ ಬಂಟನಾಗಿ ನಿಲ್ಲುವುದು ಆತ್ಮ!

111. ಶರೀರದಲ್ಲಿ ಆತ್ಮ ಏನು ಮಾಡುತ್ತಿರುವುದು ಯಾರಿಗೂ ತಿಳಿಯದಂತೆ ನಿದ್ರಿಸುವ ಸಮಯದಲ್ಲಿ ಸಹ ಶ್ವಾಸವನ್ನು ನಡೆಸುತ್ತಿದೆ. ಅಂತಹ ಆತ್ಮ ಇರುವಿಕೆಯನ್ನು ತಿಳಿಯದೆ ಎಲ್ಲ ನಾನೇ ಮಾಡುತ್ತಿದ್ದೇನೆಂದು ಜೀವಿಯು ಭ್ರಮಿಸುತ್ತಿದ್ದರೂ ಯಾವ ಕೆಲಸವನ್ನೂ ಜೀವಾತ್ಮನಿಗೆ ಬಿಡದೆ ಎಲ್ಲ ಕೆಲಸಗಳನ್ನೂ ಎಷ್ಟೋ ತಾಳ್ಮೆಯಿಂದ ಮಾಡುತ್ತಿರುವುದು ಆತ್ಮ!

112. ಶರೀರದಲ್ಲಿ ಹೊರತುಪಡಿಸಿ ಹೊರಗೆ ಎಲ್ಲಿಯೂ ಯಾವ ವಸ್ತುವಿನಲ್ಲಿಯೂ ಇಲ್ಲದಿರುವುದು ಆತ್ಮ!

113. ಶರೀರದೊಳಗೆ ಬುದ್ಧಿಗೆ ತಿಳಿಯದ ವಿದ್ಯೆಗಳಾದ, ಪ್ರಾಣಿ ಚಿಕ್ಕಂದಿನಿಂದಲೇ ನೀರಿನಲ್ಲಿ ಈಜುವುದನ್ನು, ಕರು ಹಾಲಿನ ಕೆಚ್ಚಲನ್ನು ಗುರುತಿಸುವುದನ್ನು, ಐದು ವರ್ಷಗಳ ಚಿಕ್ಕವಯಸ್ಸಿನ ಮನುಷ್ಯನಿಗೆ ಪಾಂಡಿತ್ಯಉಂಟಾಗುವುದು ಮುಂತಾದವುಗಳನ್ನು ತಿಳಿಸುತ್ತಾ ಏನೂ ತಿಳಿಯದಂತಿರುವುದು ಆತ್ಮ!

114. ಜೀವಾತ್ಮ ಧರಿಸಿದ ಶರೀರ ಎಷ್ಟು ಪರಿಮಾಣವಿರುತ್ತದೋ ಅಷ್ಟೇ ದಪ್ಪ, ಅಷ್ಟೇ ಎತ್ತರ ಹೊಂದಿ ಆ ಶರೀರ ಆಕೃತಿಯನ್ನು ಹೊಂದಿರುವುದು ಆತ್ಮ!

115. ಶರೀರದಲ್ಲಿ ಎಲ್ಲಾ ವ್ಯಾಪಿಸಿದ್ದು, ಕರ್ಮ ಇದ್ದರೇ ಕೈಯ್ಯಲ್ಲೋ, ಕಾಲಿನಲ್ಲೋ ಶಕ್ತಿ ಇಲ್ಲದಂತೆ ಮಾಡಿ, ಅಂಗವಿಕಲನಾಗಿ ಕಾಣಿಸುವಂತೆ ಮಾಡುತ್ತಾ ಜೀವಾತ್ಮನಿಗೆ ಕರ್ಮವನ್ನು ಅನುಭವಿಸುವಂತೆ ಮಾಡುವುದು ಆತ್ಮ!

116. ಶರೀರದಲ್ಲಿ ಪ್ರಾರಬ್ಧಕರ್ಮವನ್ನು ಜೀವಾತ್ಮನಿಂದ ಅನುಭವಿಸುವಂತೆ ಮಾಡುವ ಯಮಧರ್ಮರಾಜನಾಗಿ, ಅಹಂ ಇರುವವನಿಗೆ ಆಗಾಮಿಕರ್ಮವನ್ನು ತಲೆಗೆ ಏರಿಸುವುದರಲ್ಲಿ ಚಿತ್ರಗುಪ್ತನಾಗಿ ಚಲಾವಣೆ ಆಗುವುದು ಆತ್ಮ!

117. ಮರಣದಲ್ಲಿಯೂ, ಹುಟ್ಟುವಿಕೆಯಲ್ಲಿಯೂ ಜೀವಾತ್ಮನ ಹಿಂದೆ ಇದ್ದು ಮರಣದಿಂದ ಹುಟ್ಟುವಿಕೆವರೆಗು ಗುಣಗಳನ್ನೂ, ಜೀವಿಯ ಕರ್ಮ ಸಮುದಾಯವನ್ನೂ ತೆಗೆದುಕೊಂಡು ಬರುತ್ತಿರುವುದು ಆತ್ಮ!

118. ಶರೀರದಲ್ಲಿ ಎಲ್ಲ ಕೆಲಸಗಳು ಮಾಡುತ್ತಾ, ಯಾವೊಂದು ಕೆಲಸವನ್ನು ಸಹ ನಾನು ಮಾಡಿದ್ದೇನೆಂದು ಹೊರಗೆ ತಿಳಿಸದೆ, ಎಷ್ಟೋ ವಿಜ್ಞಾನ ಪರಿಕರಗಳನ್ನು ಕಂಡು ಹಿಡಿಸುವ ಯೋಚನೆಯನ್ನು ಕೊಟ್ಟಿದ್ದರೂ ಏನೂ ತಿಳಿಯದ ಜೀವಾತ್ಮ ನಾನು ಕಂಡುಹಿಡಿದಿದ್ದೇನೆಂದು ಹೇಳಿಕೊಳ್ಳುತ್ತಿದ್ದರೂ ಸುಮ್ಮನೆ ನೋಡುತ್ತಿರುವುದು ಆತ್ಮ!

119. ಸಾವಿನಲ್ಲಿಯೂ, ಹುಟ್ಟುವಿಕೆಯಲ್ಲಿಯೂ ಸಾಕ್ಷೀಭೂತನಾಗಿ ಆ ಸಮಯದಲ್ಲಿ ಏನು ನಡೆಯುತ್ತಿದೆಯೋ ಯಾರಿಗೂ ತಿಳಿಯದ ರಹಸ್ಯವನ್ನು ತಿಳಿದಿರುವುದು ಆತ್ಮ!

120. ಗಿಡದಲ್ಲಿ ಗಿಡದ ಆಕೃತಿಯನ್ನು ಹೋಲಿದ್ದು, ಪ್ರಾಣಿಗಳಲ್ಲಿ ಪ್ರಾಣಿ ಆಕೃತಿಯನ್ನು ಹೋಲಿದ್ದು, ಮನುಷ್ಯನಲ್ಲಿ ಮನುಷ್ಯನ ಆಕೃತಿಯನ್ನು ಹೋಲಿದ್ದು ಅನೇಕ ಶರೀರಗಳಲ್ಲಿ ಆ ಶರೀರಗಳ ಹಾಗೆ ಅನೇಕ ಆಕಾರಗಳು ಹೊಂದಿರುವುದು ಆತ್ಮ!

**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲಗಳೆದರೂ ಅದು ಅಸತ್ಯವಲ್ಲ.**

# ಉ ಎಂದರೆ ಏನು?

Author :
The Only GURU of Three Religions
The Spiritual Emperor, Thraitha Theorem Originator
Sri Acharya Prabodhananda Yogeeshwarulu

www.thraithashakam.org